ಮಹಾತ್ಮಾ ಗಾಂಧೀಜಿಯವರ

# ಮಂಗಲ ಪ್ರಭಾತ

( ಎರಡನೆಯ ಮುದ್ರಣ )



ಅನುವಾದಕರು :

ಶ್ರೀ. ರಾಮಚಂದ್ರ ವೆಂಕಟೇಶ ವಡವಿ



ಪ್ರಕಾಶಕರು :

**ಕರ್ನಾಟಕ ಶಿಕ್ಷಣ ಸಮಿತಿ, ಹುಬ್ಬಳ್ಳಿ**



= ೧೯೪೩ ಸಪ್ತಂಬರ

**ಬೆಲೆ ಐದು ಆಣೆ**

# ಗುರುಗಳ ಆಶೀರ್ವಾದ

ನನ್ನ ಸಹಕಾರಿಗಳಾದ ಚಿ. ರಾಮಚಂದ್ರ ವಡವಿಯವರು 'ಮಂಗಲ ಪ್ರಭಾತ'ವನ್ನು ಕನ್ನಡದಲ್ಲಿ ಭಾಷಾಂತರಿಸಿದ್ದಾರೆ. ಈ ಪುಸ್ತಕದಲ್ಲಿ ತೋರಿಸಿದ ಆದರ್ಶಕ್ಕನುಸರಿಸಿ ತಮ್ಮ ಜೀವನವನ್ನು ಮುಂದುವರಿಸಲಿಕ್ಕೆ ಮನಃಪೂರ್ವಕ ಪ್ರಯತ್ನವು ವಡವಿಯವರದು ಇರುವುದರಿಂದ ಅವರು ಈ 'ಮಂಗಲ ಪ್ರಭಾತ'ದ ಅನುವಾದ ಮಾಡಲಿಕ್ಕೆ ಹೆಚ್ಚಿಗೆ ಯೋಗ್ಯರಾಗಿದ್ದಾರೆಂದು ನನಗೆ ಅನಿಸುತ್ತದೆ. ಮಹಾತ್ಮಾಜಿಯವರು ಈ ಪುಸ್ತಕವನ್ನು ಗುಜರಾತಿ ಭಾಷೆಯ ಸಲುವಾಗಿ ಬರೆಯದೆ, ಅದರೊಳಗಿನ ವಿಚಾರಗಳ ಮನನ ಮತ್ತು ಅನುಕರಣವನ್ನು ದೇಶದೊಳಗಿನ ತರುಣರು ಮಾಡಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಬರೆದಿದ್ದಾರೆ. ರಾಮಚಂದ್ರ ವಡವಿಯವರ ಈ ಕನ್ನಡ ಅನುವಾದದ ವಿಷಯವಾಗಿ ಸಹ ಇದೇ ಭಾವನೆಯನ್ನು ಮನಸ್ಸಿನಲ್ಲಿಟ್ಟು ಕನ್ನಡ ತರುಣರು ಈ ಪುಸ್ತಕವನ್ನು ತಮ್ಮ ಜೀವನ ಮಾರ್ಗದರ್ಶಕವನ್ನಾಗಿ ಮಾಡಿಕೊಂಡರೆ ಅವರ ಮುಖಾಂತರ ದೇಶದ್ದೂ ಕಲ್ಯಾಣವಾಗುವುದೆಂದು ನನ್ನ ಶ್ರದ್ಧೆಯು.

ತಾ. ೨೭-೧೨-೩೩
ಹುದಲಿ

ಗಂಗಾಧರ ಬಾಲಕೃಷ್ಣ
ದೇಶಪಾಂಡೆ

# — ಮೂಲ ಗ್ರಂಥದ ಮುನ್ನುಡಿ —

ಯರವಡಾ ತುರಂಗಕ್ಕೆ ಗಾಂಧೀಜಿಯವರು 'ಯರವಡಾ ಮಂದಿರ'ವೆಂಬ ಹೆಸರನ್ನು ಕೆಡವಿದರು. ಅಲ್ಲಿ ಅವರಿಗೆ ಹೊರಗಿನ ಎಷ್ಟೋ ವೃತ್ತ ಪತ್ರಗಳು ಓದಲಿಕ್ಕೆ ಸಿಗುತ್ತಿದ್ದವು. ಆಶ್ರಮದಿಂದ ಎಷ್ಟೋ ಪತ್ರಗಳೂ ಬರುತ್ತಿದ್ದವು. ಆದರೂ ಈ ನಿವೃತ್ತಿಯ ಸಮಯವನ್ನು ಅವರು ಸೂತ್ರ ಯಜ್ಞದಲ್ಲಿಯೂ (ಯಜ್ಞಾರ್ಥ ತಾಸಾನುತಾಸು ನೂಲುವದರಲ್ಲಿ) ರಾಟಿಯ ಭಕ್ತಿಯಲ್ಲಿಯೂ ಗೀತೆಯ ಮನನದಲ್ಲಿಯೂ ಕಳೆದಿರುವರೆಂದು ಹೇಳಿದರೂ ಸಲ್ಲುವದು. ಈ ಸಮಯದಲ್ಲಿ ಸಾಬರಮತಿಯ ಆಶ್ರಮವಾಸಿಗಳ ಜೀವನ ಕ್ರಮದಲ್ಲಿ ಹೆಚ್ಚು ಚೈತನ್ಯವನ್ನುಂಟು ಮಾಡುವ ಅವಶ್ಯವಿದೆ ಎಂದು ಒಬ್ಬಿಬ್ಬ ಬಂಧುಗಳು ಹೇಳಿಕೊಂಡ ಪ್ರಕಾರ ಗಾಂಧೀಜಿಯವರು ಆಶ್ರಮ ವಾಸಿಗಳನ್ನುದ್ದೇಶಿಸಿ ಸಾಪ್ತಾಹಿಕ ಪತ್ರವನ್ನು ಬರೆಯಲು ಪ್ರಾರಂಭ ಮಾಡಿದರು. ಯಾವ ಕಾರ್ಯಕ್ರಮವನ್ನು ಆರಂಭ ಮಾಡಿದರೂ ಅದು ನಿಯಮಿತವಾಗಿ ಆಗಲೇಬೇಕೆಂದು ಗಾಂಧೀಜಿಯವರ ಸಂಪೂರ್ಣ ಮತ ವಿರುವದರಿಂದ ಪ್ರತಿ ಮಂಗಳವಾರದ ಬೆಳಗಿನ ಪ್ರಾರ್ಥನೆಯಾದ ಮೇಲೆ ಅವರು ಒಂದು ಪ್ರವಚನವನ್ನು ಬರೆದು ಕಳಿಸುವ ಸಂಕಲ್ಪವನ್ನು ಮಾಡಿ ದರು. ಈ ಸಂಕಲ್ಪದ ಮೊದಲನೇ ಫಲವೆಂದರೆ ಆಶ್ರಮದ ವ್ರತಗಳ ಮೇಲಿನ ಅವರ ಈ ಭಾಷ್ಯವು. ಇದು 'ವ್ರತ ವಿಚಾರ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.

ಆದರ್ಶ ಕೈದಿಯಂತೆ, ಸರಕಾರಕ್ಕೆ ಎಲ್ಲ ರೀತಿಯಿಂದ ನಿರ್ಭಯ ವನ್ನುಂಟು ಮಾಡುವ ಗಾಂಧೀಜಿಯವರು ತುರಂಗದಲ್ಲಿದ್ದಾಗ 'ಸ್ವದೇಶಿ' ವಿಷಯವನ್ನು ಕುರಿತು ಏನೂ ಬರೆಯಬಾರದೆಂದು ನಿಶ್ಚಯಿಸಿದರು. ಆದ್ದ ರಿಂದ ಆಶ್ರಮದ ವ್ರತಗಳಲ್ಲೊಂದಾದ 'ಸ್ವದೇಶಿ' ವಿಷಯ ವಿಚಾರವು ವಿವೇಚಿಸದೆ ಹಾಗೇ ಉಳಿದು ಹೋಗಿತ್ತು. ಹೊರಗೆ ಬಂದ ಮೇಲೆ ಅವರು ಸ್ವದೇಶಿ ವ್ರತವಿಚಾರದ ಬಗ್ಗೆ ಒಂದು ಲೇಖವನ್ನು ಬರೆದು ಕೊಟ್ಟರು. ಅದು ನವಜೀವನದಲ್ಲಿ ಪ್ರಸಿದ್ಧವಾಗಿದೆ. **ಈ** ಆವೃತ್ತಿಯಲ್ಲಿ **ಈ ಲೇಖವನ್ನು ಸೇರಿಸಿ ಆಶ್ರಮ ವ್ರತಗಳ ವಿಚಾರವನ್ನು ಸಂಪೂರ್ಣ ಮಾಡಿದೆ.**

ಮೇಲೆ ಹೇಳಿದಂತೆ ಈ ಪ್ರವಚನಗಳನ್ನು ಪ್ರತಿ ಮಂಗಳವಾರ ದಿನ ಪ್ರಭಾತಕಾಲದಲ್ಲಿ ಬರೆಯುತ್ತಿದ್ದದರಿಂದ ಈ ಪ್ರವಚನ ಸಂಗ್ರಹದ ಹೆಸರನ್ನು 'ಮಂಗಲ ಪ್ರಭಾತ'ವೆಂದೇ ಇಟ್ಟಿದೆ. ನಮ್ಮ ರಾಷ್ಟ್ರೀಯ ಜೀವನದಲ್ಲಿ ನಿರಾಶೆಯೆಂಬ ಘೋರವಾದ ಕಗ್ಗತ್ತಲೆಯ ಸಾಮ್ರಾಜ್ಯವು ಹಬ್ಬಿದಾಗ, ಆಶೆ, ಆತ್ಮವಿಶ್ವಾಸ, ಸ್ಫೂರ್ತಿ ಧಾರ್ಮಿಕತೆ ಇವುಗಳ ಉಷಃಕಾಲವನ್ನುಂಟು ಮಾಡಿದ ಆ ವ್ರತಗಳೇ ಕೊನೆಗೆ ಒಂದು ಹೊಸ ಸಂಸ್ಕೃತಿಯ 'ಮಂಗಲ ಪ್ರಭಾತ'ವನ್ನು ಪ್ರಾರಂಭ ಮಾಡಿದವೆಂದು ನಾವು ತಿಳಿದರೆ ಅದರಲ್ಲಿ ಸ್ವಲ್ಪಾದರೂ ಅತಿಶಯೋಕ್ತಿಯುಂಟಾಗಲಾರದು.

**ದತ್ತಾತ್ರೇಯ ಬಾಲಕೃಷ್ಣ ಕಾಲೇಲಕರ**

## ಜೀವನ ರಸಾಯನ

ಮಹಾತ್ಮಾ ಗಾಂಧೀಯವರ ಜೀವನ ಸಿದ್ಧಾಂತದ ಎಲ್ಲ ರಹಸ್ಯವು 'ಮಂಗಲ ಪ್ರಭಾತ'ವೆಂಬ ಈ ಚಿಕ್ಕ ಪುಸ್ತಕದಲ್ಲಿ ಬಂದುಹೋಗಿದೆ. ಎಲ್ಲ ಧರ್ಮದ ಸಾರವೂ ಇದರಲ್ಲಿ ಅರ್ಕರೂಪದಿಂದ ಕಂಡುಬರುತ್ತದೆ. ಆಚರಣೆಯಲ್ಲಿ ತರತಕ್ಕಂಥ ಎಲ್ಲ ಧರ್ಮಗಳೂ ಈ ಪುಸ್ತಕದಲ್ಲಿ ಸವಾ ವಿಷ್ಟವಾಗಿರುತ್ತವೆ. ವ್ಯಕ್ತಿಗತ, ಸಾಮಾಜಿಕ, ಮತ್ತು ರಾಷ್ಟ್ರೀಯ ಸಾಮರ್ಥ್ಯವನ್ನು ಬೆಳಿಸುವ ಸತ್ಯಮಾರ್ಗವನ್ನು ಗಾಂಧೀಜಿಯವರು ಇಲ್ಲಿ ತೋರಿಸಿದ್ದಾರೆ. ಇದರಂತೆ ನಡೆದರೆ ತಮ್ಮಿಂದ ಯಾರದೂ ಅಕಲ್ಯಾಣ ವಾಗದೆ, ತನ್ನದೂ, ಉಳಿದವರದೂ ಪರಮ ಕಲ್ಯಾಣವೇ ಆಗುವದಿದೆ.

ನಾನು ಈ ಭಾಷಾಂತರವನ್ನು ಲಕ್ಷ್ಯಪೂರ್ವಕವಾಗಿ ಅಕ್ಷರಶಃ ನಿರೀಕ್ಷೆ ಮಾಡಿರುವೆನು. ಅದೀಗ ಎಲ್ಲವೂ ಸರಿಯಾಗಿದೆ. ಮೂಲಭಾವಕ್ಕೆ ಎಲ್ಲಿಯೂ ವಿಸಂಗತವಾಗಿಲ್ಲವೆಂದು ನನ್ನ ಮನವರಿಕೆಯಾಗಿದೆ.

ಇದು ಒಮ್ಮೆಲೆ ಕೂತು ಓದಿ ಮುಗಿಸುವ ಪುಸ್ತಕವಲ್ಲ. ಅಂತ ರ್ಮುಖಿಯಾಗಿ ಶಾಂತತೆಯಿಂದ ಮನನಪೂರ್ವಕ ಇದರ ಪಾರಾಯಣ ಮಾಡಬೇಕು; ತನ್ನ ಆಯುಷ್ಯದಲ್ಲಿ ಯಾವ ಯಾವ ಹೆಚ್ಚು ಕಡಿಮೆಮಾಡ ಬೇಕೆಂಬುದರ ಚಿಂತನವು ಆಗಬೇಕು. ಹೀಗಾದಾಗಲೇ ಈ ಪುಸ್ತಕವು ಚಿಂತಾಮಣಿಯಾಗುವದು. ವಿಚಾರಮಯ ಜೀವನವು ಮತ್ತು ಉತ್ಸಾಹ ರೂಪೀ ಆಸ್ತಿಕತೆಯು ಇವೇ ಪ್ರಗತಿಯ ಪೂರ್ವಪೀಠಿಕೆಯಾಗಿವೆ.

೨೧-೧೨-೩೩
ಅಹಮದಾಬಾದ

**ಕಾಕಾ ಕಾಲೇಲಕರ**

# ಪ್ರಕಾಶಕರ ಎರಡು ಮಾತುಗಳು

ಮಹಾತ್ಮಾ ಗಾಂಧಿಯವರು ಈ 'ಮಂಗಲ ಪ್ರಭಾತ' ವೆಂಬ ಪುಸ್ತಕವನ್ನು ಬರೆದದ್ದೂ ತುರಂಗದಲ್ಲಿಯೇ ಶ್ರೀ. ವಡವಿ ರಾಮರಾಯರು ಕನ್ನಡ ಅನುವಾದ ಮಾಡಿದ್ದೂ ತುರಂಗದಲ್ಲಿಯೇ. ಇವೆರಡೂ ಸಮಯ ದಲ್ಲಿ ಶ್ರೀ. ಕಾಕಾ ಕಾಲೇಲಕರರು ಅವರವರ ಜೊತೆಯಲ್ಲಿ ತುರಂಗ ದಲ್ಲಿಯೇ ಇದ್ದರು. ಅದರಿಂದ ಈ ಪುಸ್ತಕಕ್ಕೆ ಒಪ್ಪುಕೊಟ್ಟಂತಾಗಿದೆ. ತುರಂಗದಲ್ಲಿ ಆದ ಶ್ರೀಕೃಷ್ಣ ಜನ್ಮವು ಜಗತ್ತಿಗೇ ಮಂಗಲವನ್ನುಂಟು ಮಾಡಿದಂತೆ, ತುರಂಗದಲ್ಲಿಯೇ ಜನ್ಮವೆತ್ತಿ ಬೆಳೆದ ಈ 'ಮಂಗಲ ಪ್ರಭಾತ'ವು ಜಗತ್ತಿಗೇ ಮಂಗಲವನ್ನುಂಟು ಮಾಡುವದು ಸಹಜವಿದೆ. ಮಹಾತ್ಮರ ಸಹವಾಸದಲ್ಲಿ ಸಾಬರಮತಿಯ ಸತ್ಯಾಗ್ರಹಾಶ್ರಮದಲ್ಲಿಯೂ ಗಾಂಧಿಜಿಯವರ ಸಚ್ಛಿಷ್ಯರ ಸಹವಾಸದಲ್ಲಿಯೂ ಶ್ರೀ. ಗಂಗಾಧರ ರಾಯರ ಶಿಷ್ಯತ್ವದಲ್ಲಿಯೂ ತಮ್ಮ ಆಯುಷ್ಯದ ಮುಖ್ಯಾಂಶವನ್ನು ಕಳೆ ದಂಥ ಅಚ್ಚ ಕನ್ನಡ ತರುಣವೀರರಾದ ವಡವಿ ರಾಮರಾಯರು ಈ ಅನು ವಾದವನ್ನು ಮಾಡಿದ್ದು ಈ ಪುಸ್ತಕದ ಕಳೆಯನ್ನೇರಿಸಿದೆ. ಕನ್ನಡಿಗರು ಇದನ್ನು ಮನ್ನಿಸಿದರೆ ಗಾಂಧಿ ವಾಙ್ಮಯವನ್ನು ಹೆಚ್ಚು ಹೆಚ್ಚಾಗಿ ಕನ್ನಡಿ ಗರ ಮುಂದೆ ಇರಿಸಬೇಕೆಂದು ಆಲೋಚಿಸಿದ್ದೇವೆ. ಆ ಸೇವೆಯನ್ನು ಮಾಡಿಸಿಕೊಳ್ಳುವದು ಕನ್ನಡಿಗರನ್ನೇ ಕೂಡಿದೆ.

ಕ. ಶಿ. ಸ. ಹುಬ್ಬಳ್ಳಿ
೨೦-೧-೧೯೩೪

ಸುರೇಂದ್ರ ಶಿವರಾವ ದೇಸಾಯಿ
ಕಾರ್ಯದರ್ಶಿ

## ಎರಡನೇ ಆವೃತ್ತಿ

ಈ ಚಿಕ್ಕ ಪುಸ್ತಕದ ಎರಡನೇ ಆವೃತ್ತಿಯನ್ನು ಈಗ ಪ್ರಕಟಿಸುತ್ತಲಿದ್ದೇವೆ. ಈ ಆವೃತ್ತಿಯಲ್ಲಿ ಭಾಷೆಯ ದೋಷಗಳನ್ನು ಮಾತ್ರ ತಿದ್ದಲಾಗಿದೆ. ಕಾಗದದ ತುಟಾಗ್ರತೆಯು ಈಗಿನ ಕಾಲದಲ್ಲಿ ಪುಸ್ತಕದ ಬೆಲೆಯನ್ನು ಒಂದಾಣೆ ಹೆಚ್ಚಿಸಿದೆ. ಮೊದಲನೇ ಆವೃತ್ತಿಯು ಪ್ರಕಟವಾದನಂತರ ಈ ಏಳೆಂಟು ವರ್ಷಗಳಲ್ಲಿ ಗಾಂಧೀಜಿಯವರ ತತ್ವಜ್ಞಾನದ ಪ್ರಸಾರವು ಹೆಚ್ಚಾದದ್ದು ಕಂಡುಬರುತ್ತಿದೆ. ಆದ್ದರಿಂದ ಕನ್ನಡಿಗರು ಈ ಚಿಕ್ಕಪುಸ್ತಕವನ್ನು ಹೆಚ್ಚಾಗಿ ಪ್ರೋತ್ಸಾಹಿಸುವರೆಂದು ಆಶಿಸುತ್ತೇವೆ.

ಹುಬ್ಬಳ್ಳಿ
೨೪–೯–೧೯೪೨

—ಪ್ರಕಾಶಕರು

# ಪ ರಿ ವಿ ಡಿ


| ಸಂ. | ವಿಷಯ | | | | ಪೃಷ್ಠ |
|---|---|---|---|---|---|
| ೧ | ಸತ್ಯ | .... | .... | .... | ೧ |
| ೨ | ಅಹಿಂಸೆ | .... | .... | .... | ೪ |
| ೩ | ಬ್ರಹ್ಮಚರ್ಯ | | .... | .... | ೭ |
| ೪ | ಅಸ್ವಾದ | .... | .... | .... | ೧೨ |
| ೫ | ಅಸ್ತೇಯ | .... | .... | .... | ೧೬ |
| ೬ | ಅಪರಿಗ್ರಹ | | .... | .... | ೧೯ |
| ೭ | ಅಭಯ | .... | .... | .... | ೨೩ |
| ೮ | ಅಸ್ಪೃಶ್ಯತಾ ನಿವಾರಣೆ | | .... | .... | ೨೫ |
| ೯ | ಕಾಯಕ | .... | .... | .... | ೨೯ |
| ೧೦ | ಸರ್ವಧರ್ಮ ಸಮಭಾವ- ೧ | | | .... | ೩೨ |
| ೧೧ | ಸರ್ವಧರ್ಮ ಸಮಭಾವ- ೨ | | | .... | ೩೫ |
| ೧೨ | ನಮ್ರತೆ | .... | .... | .... | ೩೮ |
| ೧೩ | ಸ್ವದೇಶಿ | .... | .... | .... | ೪೧ |
| ೧೪ | ಸ್ವದೇಶಿ ವ್ರತ | | .... | .... | ೪೧ |
| ೧೫ | ವ್ರತದ ಆವಶ್ಯಕತೆ | | .... | .... | ೪೫ |
| ೧೬ | ಪರಿಶಿಷ್ಟ | .... | .... | .... | ೪೯ |

# ಮಂಗಲ ಪ್ರಭಾತ

—∘∘⁂∘∘—

## ೧ ಸತ್ಯ

ತಾ॥ ೨೨–೭–೩೦

( ಮುಂಜಾವಿನ ಪ್ರಾರ್ಥನೆಯನಂತರ )

ಸತ್ಯದ ಆಗ್ರಹವೇ ನಮ್ಮ ಸಂಸ್ಥೆಯ ಮೂಲಾಧಾರವು. ಆದುದರಿಂದ ಸತ್ಯವನ್ನೆ ನಾನು ಮೊದಲು ವಿವೇಚಿಸುತ್ತೇನೆ.

ಸತ್ಯ ಶಬ್ದವು ‘ ಸತ್ ’ ಧಾತುವಿನಿಂದ ಉಂಟಾದುದು. ‘ ಸತ್ ’ ಎಂದರೆ ಇರು; ಸತ್ಯವೆಂದರೆ ಇರುವಿಕೆ. ಸತ್ಯದ ಹೊರತು ಬೇರೆ ಯಾವ ವಸ್ತುವಿಗೂ ಅಸ್ತಿತ್ವವೇ ಇರುವದಿಲ್ಲ. ಪರಮೇಶ್ವರನ ನಿಜವಾದ ಹೆಸರೇ ‘ ಸತ್ ’ ಎಂದರೆ ಸತ್ಯವೆಂದು ಇರುತ್ತದೆ. ಆದುದರಿಂದ ಪರಮೇಶ್ವರನು ಸತ್ಯನಿದ್ದಾನೆಂದು ಹೇಳುವದಕ್ಕಿಂತ ಸತ್ಯವೆ ಪರವೇಶ್ವರನೆಂದು ಹೇಳುವದು ಹೆಚ್ಚು ಯುಕ್ತವಾದುದು. ರಾಜಕರ್ತನಿಲ್ಲದೆ — ನಾಯಕನಿಲ್ಲದೆ ನಮ್ಮ ಜೀವನವು ಸಾಗಲಾರದು. ಆದುದರಿಂದ ಪರಮೇಶ್ವರನೆಂಬ ಹೆಸರು ಹೆಚ್ಚು ರೂಢಿಯಲ್ಲಿ ಬಂದಿದೆ. ಮತ್ತು ಮುಂದಾದರೂ ಇದೇ ಇರುವದು. ವಿಚಾರ ಮಾಡಲಾಗಿ ‘ ಸತ್, ಅಥವಾ ಸತ್ಯ ’ ವೆಂಬುದೇ ನಿಜವಾದ ಹೆಸರೆಂದೂ ಇದೇ ಪೂರ್ಣಾರ್ಥವನ್ನು ಸೂಚಿಸುತ್ತದೆಂದೂ ಕಂಡುಬರುವದು.

ಇದಲ್ಲದೆ ಸತ್ಯವಿದ್ದಲ್ಲಿ ಜ್ಞಾನವು–ಶುದ್ಧಜ್ಞಾನವು ಇದ್ದೇ ಇರುತ್ತದೆ. ಸತ್ಯವಿಲ್ಲದಲ್ಲಿ ಶುದ್ಧ ಜ್ಞಾನವಿರುವದು ಶಕ್ಯವೇ ಇಲ್ಲ. ಆದುದರಿಂದ ‘ ಈಶ್ವರ ’ ಹೆಸರಿನ ಜೊತೆಗೆ ‘ ಚಿತ್, ಎಂದರೆ ಜ್ಞಾನ ’ ವೆಂಬ ಶಬ್ದವನ್ನು ಉಪಯೋಗಿಸಲಾಗಿದೆ. ಸತ್ಯಜ್ಞಾನವಿದ್ದಲ್ಲಿ ಆನಂದವೇ ಹೊರತು ಶೋಕವೆಲ್ಲಿಂದ ಬರಬೇಕು? ಸತ್ಯವು ಶಾಶ್ವತವಾಗಿರುವದರಿಂದ ಆನಂದವೂ ಶಾಶ್ವತವಾಗಿರುತ್ತದೆ. ಇದಕ್ಕಾಗಿಯೇ ನಾವು ಈಶ್ವರನನ್ನು ‘ ಸಚ್ಚಿದಾನಂದ ’ ಎಂಬ ಹೆಸರಿಸಿಂದಲೂ ಕರೆಯುತ್ತೇವೆ.

ಈ ಸತ್ಯದ ಆರಾಧನೆಗಾಗಿಯೇ ನಾವು ಹುಟ್ಟಿ ಬಾಳುವದು. ಅದಕ್ಕಾಗಿಯೇ ನಮ್ಮ ಪ್ರತಿಯೊಂದು ಪ್ರವೃತ್ತಿಯು. ನಮ್ಮ ಪ್ರತಿಯೊಂದು ಶ್ವಾಸೋಚ್ಛ್ವಾಸವೂ ಅದಕ್ಕಾಗಿಯೇ ಇರುವದೆಂಬದು ನಮಗೆ ಗೊತ್ತಾದರೆ ಉಳಿದ ಎಲ್ಲ ನಿಯಮಗಳು ಅನಾಯಾಸವಾಗಿ ನಮ್ಮ ಕೈವಶವಾಗುವವಲ್ಲದೆ, ಅವುಗಳ ಪಾಲನವು ಕೂಡ ಸುಲಭವಾಗುವದು. ಸತ್ಯದ ಹೊರತು ಯಾವ ನಿಯಮವನ್ನೂ ಪೂರ್ಣ ಪಾಲಿಸಲಿಕ್ಕಾಗುವದಿಲ್ಲ.

'ಸತ್ಯ' ಎಂದರೆ ಕೇವಲ ಸತ್ಯಮಾತಾಡುವದೇ ಎಂದು ನಾವು ಸಾಮಾನ್ಯವಾಗಿ ತಿಳಿಯುತ್ತೇವೆ. ಆದರೆ ಇಲ್ಲಿ 'ಸತ್ಯ' ಶಬ್ದಕ್ಕೆ ವಿಶೇಷವಾದ ವ್ಯಾಪಕಾರ್ಥವುಂಟು. ವಿಚಾರದಲ್ಲಿ, ನುಡಿಯಲ್ಲಿ, ನಡೆಯಲ್ಲಿ, ಸತ್ಯವಿದ್ದಷ್ಟೇ ಸತ್ಯವು. ಈ ಸತ್ಯದ ಜ್ಞಾನವು ಸಂಪೂರ್ಣವಾಗಿ ಆದಂಥವನಿಗೆ ಜಗತ್ತಿನೊಳಗೆ ಬೇರೆ ಏನೂ ತಿಳಿದುಕೊಳ್ಳುವದು ಇರುವದಿಲ್ಲ. ಏಕೆಂದರೆ ಜ್ಞಾನವೆಂಬುದೆಲ್ಲವು ಸತ್ಯದಲ್ಲಿಯೆ ಅಡಕವಾಗಿರುವದೆಂಬದನ್ನು ಈ ಮೊದಲೇ ವಿವರಿಸಲಾಗಿದೆ. ಅದರಲ್ಲಿ ಅಡಕವಾಗದಿದ್ದುದು ಸತ್ಯವೂ ಅಲ್ಲ. ಜ್ಞಾನವೂ ಅಲ್ಲ. ಅದರಿಂದ ನಿಜವಾದ ಆನಂದವಾದರೂ ಹೇಗೆ ದೊರೆಯಬೇಕು? ಹೀಗೆ ನಾವು ಒರೆಗೆ ಹಚ್ಚುತ್ತ ಹೋಗುವದರಿಂದ ನಮ್ಮ ಪ್ರವೃತ್ತಿಗಳಲ್ಲಿ ಮಾಡಲಿಕ್ಕೆ ಎಷ್ಟೋ ಗ್ರಾಹ್ಯವಾದವುಗಳೆಂದೂ ಎಷ್ಟೋ ಅಗ್ರಾಹ್ಯವಾದವುಗಳೆಂದೂ ನೋಡಲಿಕ್ಕೆ ಎಷ್ಟೋ ಯೋಗ್ಯವಾದವುಗಳೆಂದೂ ಎಷ್ಟೋ ಅಯೋಗ್ಯವಾದವುಗಳೆಂದೂ ಓದಲಿಕ್ಕೆ ಎಷ್ಟೋ ಅರ್ಹವಾದವುಗಳೆಂದೂ ಎಷ್ಟೋ ಅನರ್ಹವಾದವುಗಳೆಂದೂ ಬೇಗನೆ ಕಂಡುಬರುವದು.

ಆದರೆ ಚಿಂತಾಮಣಿ, ಕಾಮಧೇನುಗಳಂತಹ ಸತ್ಯವು ನಮಗೆ ಹೇಗೆ ದೊರೆಯಬೇಕು? ಈ ಪ್ರಶ್ನೆಗೆ ಭಗವಾನ್ ಶ್ರೀಕೃಷ್ಣನೇ ಉತ್ತರವನ್ನು ಹೇಳಿದ್ದಾನೆ, "ಅಭ್ಯಾಸದಿಂದಲೂ ವೈರಾಗ್ಯದಿಂದಲೂ" ಎಂದು. ಸತ್ಯದ ತಳಮಳವೇ ಅಭ್ಯಾಸವು. ಅದನ್ನುಳಿದು ಮಿಕ್ಕ ಎಲ್ಲ ವಿಷಯಗಳ ಬಗ್ಗೆ ಆತ್ಯಂತಿಕ ಉದಾಸೀನತೆಯೇ ವೈರಾಗ್ಯವು. ಹೀಗಿದ್ದರೂ ಒಬ್ಬರಿಗೆ ಸತ್ಯವಿದ್ದುದು ಮತ್ತೊಬ್ಬರಿಗೆ ಅಸತ್ಯವೆನಿಸುತ್ತದೆಂಬದನ್ನು ನಾವು ದಿನಾಲು ನೋಡುತಿದ್ದೇವೆ. ಇದಕ್ಕಾಗಿ ಭಯಪಡುವ ಕಾರಣವಿಲ್ಲ. ಏಕೆಂದರೆ, ಸತ್ಯಕ್ಕಾಗಿ ಶುದ್ಧ ಪ್ರಯತ್ನವಿದ್ದಲ್ಲಿ, ಬೇರೆ ಬೇರೆಯಾಗಿ

ಕಾಣಿಸುವ ಎಲ್ಲ ಸತ್ಯಗಳೂ ಒಂದೇ ಗಿಡದ ಅನೇಕ ಟೊಂಗೆಗಳು ಬೇರೆ ಬೇರೆಯಾಗಿ ಕಾಣಿಸುವಂತೆ ತೋರುತ್ತವೆ. ಪರಮೇಶ್ವರನು ಪ್ರತಿಯೊಬ್ಬ ಮನುಷ್ಯನಲ್ಲಿ ಬೇರೆಬೇರೆಯಾಗಿ ಕಂಡರೂ ಆತನು ಕೂಡ ಒಬ್ಬನೇ ಇರುವನೆಂದು ನಾವು ತಿಳಿಯುತ್ತೇವೆ. ಪರಮೇಶ್ವರನಿಗೆ ಸತ್ಯ ವೆಂಬ ಹೆಸರು ಇರುವದರಿಂದ, ನಮಗೆ ಯಾವುದು ಸತ್ಯವೆನಿಸುತ್ತದೆಯೋ ಅದರಂತೆ ವರ್ತಿಸುವದರಲ್ಲಿ ದೋಷವಿರುವದಿಲ್ಲ. ಇಷ್ಟೇ ಅಲ್ಲ; ಅದರಂತೆ ವರ್ತಿಸುವದೇ ನಮ್ಮ ಕರ್ತವ್ಯಕರ್ಮವಾಗಿರುತ್ತದೆ. ಇಷ್ಟಾದರೂ ನಮ್ಮ ಈ ವರ್ತನದಲ್ಲಿ ದೋಷವಿರುವದೆಂದು ನಮಗೆ ಕಂಡು ಬಂದರೆ ಅದನ್ನೂ ನಾವು ಸರಿಪಡಿಸಿಕೊಳ್ಳಬಹುದು. ಸತ್ಯದ ಶೋಧನೆಗೆ ತಪಶ್ಚರ್ಯೆಯು ಬೆಂಬಲವು ಬೇಕು. ತಪಶ್ಚರ್ಯೆಯೆಂದರೆ ಸ್ವಂತದ ಕಷ್ಟವನ್ನು ಸಹನ ಮಾಡಿಕೊಳ್ಳುವದು. ಸತ್ಯಕ್ಕಾಗಿ ನಾವು ಸಾಯಬೇಕಾಗುತ್ತದೆ. ಅದರಲ್ಲಿ ಸ್ವಾರ್ಥದ ಗಂಧವೂ ಇರುವದಿಲ್ಲ. ಈ ಪ್ರಕಾರ ನಿಸ್ವಾರ್ಥಬುದ್ಧಿ ಯಿಂದ ಶೋಧಮಾಡುವಾಗ ಯಾರೂ ಕೊನೆಯತನಕ ದುರ್ಮಾರ್ಗ ಹಿಡಿದು ಹೋದದ್ದು ಇದುವರೆಗೆ ಗೊತ್ತಾಗಿಲ್ಲ. ಮನುಷ್ಯನು ಅಡ್ಡದಾರಿ ಯನ್ನು ಹಿಡಿದರೆ, ಎಡವುವದು ಸಹಜವೇ; ಆದುದರಿಂದ ಅವನು ಕೂಡಲೆ ಸರಳ ಮಾರ್ಗವನ್ನು ಹಿಡಿಯುತ್ತಾನೆ. ಸತ್ಯದ ಆರಾಧನೆಯೇ ಭಕ್ತಿಯು. ಪೂರ್ಣ ಭಕ್ತಿಯೇ ಆತ್ಮನಿವೇದನವು. ಇದಲ್ಲದೆ ಅದು ಶ್ರೀಹರಿಯ ಮಾರ್ಗವಿರುವದರಿಂದ ಅದರಲ್ಲಿ ಭಯಕ್ಕಾಗಲಿ ಅಂಜುಗುಳಿತನಕ್ಕಾಗಲಿ ಸ್ಥಳವಿರುವದಿಲ್ಲ. ಸೋಲು-ಗೆಲುವಿನಂಥದೇನೂ ಅದರಲ್ಲಿ ಇರುವುದಿಲ್ಲ. "ಸತ್ತರೂ ಸಾಯದೆ ಉಳಿಸುವ ಮಂತ್ರವಿದು". ಈಗ ನಾವು ಒಂದು ಪ್ರಕಾರದಿಂದ ಅಹಿಂಸೆಗೆ ಬಂದು ಮುಟ್ಟಿದಂತಾಯಿತು. ಇದರ ವಿಚಾರ ವನ್ನು ಮುಂದಿನ ವಾರದಲ್ಲಿ ಮಾಡುವೆನು.

ಈ ಸಮಯದಲ್ಲಿ ಹರಿಶ್ಚಂದ್ರ, ಪ್ರಲ್ಹಾದ, ರಾಮಚಂದ್ರ, ಇಮಾಮ, ಹಸನ ಹುಸೇನ, ಕ್ರೈಸ್ತ ಮುಂತಾದ ಸಂತರ ದೃಷ್ಟಾಂತಗಳು ವಿಚಾರ ಮಾಡುವಂಥವು ಇರುತ್ತವೆ.

ಮುಂದಿನ ವಾರದವರೆಗೆ ಹಿರಿಯರು, ಕಿರಿಯರು, ಹೆಂಗಸರು, ಗಂಡಸರು, ಎಲ್ಲರೂ ಅಡ್ಡಾಡುವಾಗ, ಕೂತಾಗ, ನಿಂತಾಗ, ಉಣ್ಣುವಾಗ, ತಿನ್ನುವಾಗ, ಆಡುವಾಗ, ಅಥವಾ ಯಾವದೇ ಕೆಲಸವನ್ನು ಮಾಡುವಾಗ,

ಇದರ ಚರ್ಚೆಯನ್ನು ಮಾಡುತ್ತಲೇ ಇರಬೇಕು! ಹೀಗೆ ಅದರ ವಿಚಾರವನ್ನು ಮಾಡುತ್ತಲೆ ಸಿರ್ದೋಷ ನಿದ್ರೆಯನ್ನು ತೆಗೆದುಕೊಳ್ಳಹತ್ತಿದರೆ ಎಷ್ಟು ಸೊಗಸಾಗುವದು! ನನಗಂತೂ ಆ ಸತ್ಯರೂಪಿಯಾದ ಪರಮೇಶ್ವರನು ಚಿಂತಾಮಣಿಯಾಗಿದ್ದಾನೆ. ನಮ್ಮೆಲ್ಲರಿಗೂ ಹಾಗೆಯೇ ಆಗಲಿ.

---

## ೨ ಅಹಿಂಸೆ

ತಾ|| ೨೯-೭-೩೦
ಮಂಗಲ ಪ್ರಭಾತ

ಸತ್ಯ, ಅಹಿಂಸೆ ಇವುಗಳ ಮಾರ್ಗವು ಸರಳವಿದ್ದಷ್ಟೇ ಕಠಿಣವಿದೆ. ಖಡ್ಗದ ಧಾರೆಯ ಮೇಲೆ ನಡೆದಂತೆಯಿದೆ. ಡೊಂಬರವನು ಏಕದೃಷ್ಟಿ ಮಾಡಿ ನಡೆದಾಡುವ ಹಗ್ಗಕ್ಕಿಂತ ಸತ್ಯ, ಅಹಿಂಸೆಯ ಹಗ್ಗವು ಸೂಕ್ಷ್ಮವಿದೆ; ಸ್ವಲ್ಪ ಮೈಮರೆತರಾಯಿತು; ಅದರಿಂದ ಜಾರಿ ಬೀಳುತ್ತೇವೆ. ಬಿಟ್ಟೂ ಬಿಡದೆ ಅಭ್ಯಾಸವನ್ನು ಮಾಡುತ್ತಿರುವದರಿಂದಲೇ ಸತ್ಯ ಅಹಿಂಸೆಗಳ ದರ್ಶನವಾಗುವದು.

ಆದರೆ ಸತ್ಯದ ಸಂಪೂರ್ಣ ದರ್ಶನವು ಈ ದೇಹಕ್ಕೆ ಆಗುವದು ಅಸಂಭವವವೇ! ಅದರ ಕಲ್ಪನೆಯನ್ನು ಮಾತ್ರ ಮಾಡಬಹುದು. ಕ್ಷಣಿಕವಾದ ಈ ದೇಹದ ಸಾಧನದಿಂದ ಶಾಶ್ವತವಾದ ಧರ್ಮದ ಸಾಕ್ಷಾತ್ಕಾರವು ಶಕ್ಯವಿಲ್ಲ. ಆದುದರಿಂದ ಕೊನೆಗೆ ಶ್ರದ್ಧೆಗೆ ಶರಣು ಹೋಗುವದಂತೂ ಇದ್ದೇ ಇದೆ.

ಆದುದರಿಂದಲೇ ಜಿಜ್ಞಾಸುಗಳಿಗೆ ಅಹಿಂಸೆಯು ದೊರೆಯಿತು (ತಿಳಿಯಿತು). "ನನ್ನ ಮಾರ್ಗದಲ್ಲಿ ಬಂದ ಕಷ್ಟಗಳನ್ನು ನಾನು ಸಹನ ಮಾಡಲೋ? ಅಥವಾ ಅದರ ಸಲುವಾಗಿ ನಾಶಮಾಡಬೇಕಾದನ್ನು ನಾಶ ಮಾಡುತ್ತ ಹೋಗಿ ನನ್ನ ಮಾರ್ಗವನ್ನು ಮುಂದುವರಿಸಲೋ?" ಎಂಬ ಈ ಪ್ರಶ್ನೆಯು ಅಹಿಂಸೆಯ ಜಿಜ್ಞಾಸುಗಳ ಮುಂದೆ ಬಂದು ನಿಲ್ಲುವುದು. ಮಾರ್ಗದಲ್ಲಿ ಬಂದ ಕಷ್ಟಗಳನ್ನು ನಾಶಮಾಡುತ್ತ ಹೋಗುವವರು ಮುಂದುವರಿಯದೆ ಇದ್ದಲ್ಲಿಯೇ ಇರುತ್ತಾರೆಂದೂ ಸಂಕಟ ಸಹಸಮಾಡುವವರು

ಮುಂದಡಿಯಿಡುತ್ತಾರೆಂದೂ ಜಿಜ್ಞಾಸುಗಳಿಗೆ ಕಂಡುಬರುವುದು. ಮೊದಲನೆಯ ಸಂಕಟವನ್ನು ನಾಶಮಾಡುವುದರಿಂದಲೇ ತಾವು ಹುಡುಕುವ ಸತ್ಯವು ಹೊರಗೆ ಇರದೆ ತಮ್ಮೊಳಗೇ ಇರುತ್ತದೆಂದು ಅವರಿಗೆ ಗೊತ್ತಾಗುವದು. ಅಂದರೆ ಸಂಕಟಗಳನ್ನು ನಾಶಮಾಡುತ್ತ ಹೋದಹಾಗೆ ಅವರು ಹಿಂದೆ ಹಿಂದೆಯೆ ಉಳಿಯುತ್ತಾರೆ. ಸತ್ಯವು ಅವರಿಂದ ದೂರವಾಗುತ್ತದೆ.

ಕಳ್ಳರು ನಮಗೆ ತೊಂದರೆ ಕೊಡುತ್ತಾರೆ. ಆ ತೊಂದರೆಯನ್ನು ತಪ್ಪಿಸುವದಕ್ಕಾಗಿ ನಾವು ಅವರನ್ನು ಶಿಕ್ಷಿಸುತ್ತೇವೆ. ಆ ಕ್ಷಣಕ್ಕೆ ಅವರು ಅಲ್ಲಿಂದ ಓಡಿ ಹೋಗಬಹುದೇನೋ ನಿಜ! ಆದರೆ ಎರಡನೆಯ ಕಡೆಗೆ ಹೋಗಿ ದರವಡೆ ಹಾಕುವರು. ಎರಡನೆಯ ಸ್ಥಳವಾದರೂ ನಮ್ಮದೇ ಇರುವದು. ಅಂತೂ ಹೀಗೆ ಮಾಡುವದರಲ್ಲಿ ನಾವು ತಪ್ಪು ಮಾರ್ಗವನ್ನು ಹಿಡಿದಂತಾಗುವದು. ಇದರಿಂದ ಕಳ್ಳರ ಉಪದ್ರವವು ಹೆಚ್ಚುತ್ತಹೋಗುತ್ತದೆ. ಹೇಗೆಂದರೆ:— ಕಳ್ಳರು ಕಳವು ಮಾಡುವದೇ ತಮ್ಮ ಕರ್ತವ್ಯವೆಂದು ತಿಳಿದಿರುತ್ತಾರೆ. ಕಳ್ಳರಿಗಾಗಿ ಉತ್ತಮ ಉಪಾಯವೆಂದರೆ ಅವರ ಉಪದ್ರವವನ್ನು ಸಹನಮಾಡುವದೆಂದೂ ಹೀಗೆ ಮಾಡುವದರಿಂದ ಅವನಿಗೆ ತಿಳುವಳಿಕೆ ಬರುವದೆಂದೂ ನಮಗೆ ಹೊಳೆಯುವದು. ಅವರ ಸಲುವಾಗಿ ಇಷ್ಟು ಕಷ್ಟವನ್ನು ಸಹಿಸುವದರಿಂದ ತುಡುಗರೇನೂ ನಮಗೆ ಎರಡನೆಯವರಲ್ಲವೆಂದು ಕಂಡುಬರುವದು. ನಮಗೆ ಎಲ್ಲರೂ ಆಪ್ತರಿದ್ದಾರೆ, ಮಿತ್ರರಿದ್ದಾರೆ. ಅವರನ್ನು ಶಿಕ್ಷಿಸುವದು ಒಳ್ಳೆಯದಲ್ಲ. ಇದು ಸರಿ! ಆದರೆ ಕೇವಲ ಉಪದ್ರವವನ್ನು ಸಹನಮಾಡುತ್ತ ಹೋದರೆ ನಮ್ಮ ಕರ್ತವ್ಯವಾದಂತೆ ಆಗಲಿಲ್ಲ. ಕೇವಲ ಕಷ್ಟವನ್ನು ಸಹನಮಾಡುವುದರಿಂದ ಪುಕ್ಕತನವು ಉತ್ಪನ್ನವಾಗುವದು. ಆದ್ದರಿಂದ ನಮಗೆ ಬೇರೆ ವಿಶಿಷ್ಟ ಧರ್ಮವು ಕಾಣಹತ್ತುವದು. ಕಳ್ಳರು ನಮ್ಮ ಬಾಂಧವರಿದ್ದರೆ ಅವರಲ್ಲಿಯೂ ಅದೇ ಭಾವನೆಯನ್ನು ಹುಟ್ಟಿಸಲಿಕ್ಕೆ ಬೇಕು. ನಾವು ಅವರನ್ನು ನಮ್ಮವರನ್ನಾಗಿ ಮಾಡಿಕೊಳ್ಳುವದಕ್ಕೆ ಉಪಾಯವನ್ನು ಹುಡುಕುವದರ ಸಲುವಾಗಿ ತೆಗೆದುಕೊಳ್ಳಬೇಕಾದ ತೊಂದರೆಯೊಂದು ಮಾತ್ರ ನಮ್ಮ ಪಾಲಿಗೆ ಉಳಿಯಿತು. ಇದೇ ಅಹಿಂಸೆಯ ಮಾರ್ಗವು. ಇದರಲ್ಲಿ ಉತ್ತರೋತ್ತರ ದುಃಖವನ್ನು ಸಹಿಸುವ ಮಾತೇ ಇರುವದು, ಅನಂತ

ಸಹನಶೀಲತೆಯನ್ನು ಕಲಿಸುವ ಮಾತೇ ಇರುವದು; ಅದು ಇದ್ದರೆ, ಕೊನೆಗೆ ಕಳ್ಳರು ಪ್ರಾಮಾಣಿಕರಾಗುತ್ತಾರೆ. ನಮಗೆ ಸತ್ಯದ ದರ್ಶನವು ಹೆಚ್ಚು ಸ್ಪಷ್ಟವಾಗಿ ಆಗುತ್ತದೆ. ಹೀಗೆ ಮಾಡುವುದರಿಂದ ನಾವು ಜಗತ್ತನ್ನೇ ಮಿತ್ರರನ್ನಾಗಿ ಮಾಡಿಕೊಳ್ಳಲಿಕ್ಕೆ ಕಲಿತಂತಾಗುವದು. ಈಶ್ವರನ ಸತ್ಯದ ಮಹಿಮೆಯು ಹೆಚ್ಚಿಗೆ ತಿಳಿಯುವದು. ನಾವು ಸಂಕಟಗಳಿಗೆ ಗುರಿಯಾಗುತ್ತಿದ್ದರೂ ನಮ್ಮ ಸುಖ ಶಾಂತಿಗಳು ಹೆಚ್ಚುವವು. ನಮ್ಮ ಸಾಹಸ, ಧೈರ್ಯಗಳು ಅಭಿವೃದ್ಧಿ ಹೊಂದುವವು. ನಮಗೆ ಶಾಶ್ವತ ಅಶಾಶ್ವತಗಳಲ್ಲಿಯ ಭೇದವು ಹೆಚ್ಚು ಚನ್ನಾಗಿ ಹೊಳೆಯುವದು. ಕರ್ತವ್ಯಾಕರ್ತವ್ಯಗಳ ವಿವೇಕವನ್ನು ಕಲಿಯುವೆವು. ವಿನಯವು ಬೆಳೆಯುವದು, ಅಭಿಮಾನವು ಅಳಿಯುವದು. ಪರಿಗ್ರಹವು ತನ್ನಷ್ಟಕ್ಕೆ ತಾನೆ ಕಡಿಮೆಯಾಗುವದು. ದೇಹದೊಳಗೆ ತುಂಬಿಹೋದ ಹೊಲಸು ದಿನದಿನಕ್ಕೆ ಕಡಿಮೆಯಾಗತೊಡಗುವದು.

ಈ ಅಹಿಂಸೆಯೆಂದರೆ ಈಗ ನಮಗೆ ಸ್ಥೂಲಮಾನವಾಗಿ ಕಾಣಿಸುವ ಅಹಿಂಸೆಯಷ್ಟೇ ಅಲ್ಲ. ಯಾರನ್ನೂ ಕೊಲ್ಲಬಾರದೆಂಬದಂತೂ ಇದರಲ್ಲಿ ಬಂದೇ ಬರುತ್ತದೆ. ಕುವಿಚಾರಗಳೆಲ್ಲವೂ ಹಿಂಸೆಯು. ಅವಸರವು ಹಿಂಸೆಯು. ಮಿಥ್ಯಾಭಾಷಣವು ಹಿಂಸೆಯು, ದ್ವೇಷವು ಹಿಂಸೆಯು, ಯಾರಿಗಾದರೂ ಕೇಡು ಬಗೆಯುವದು ಹಿಂಸೆಯು, ಜಗತ್ತಿಗೆ ಬೇಕಾದುದನ್ನು ನಮ್ಮ ವಶದಲ್ಲಿಟ್ಟುಕೊಳ್ಳುವದೂ ಹಿಂಸೆಯು. ಆದರೆ ನಾವು ತಿನ್ನುವದೆಲ್ಲ ಜಗತ್ತಿಗೆ ಬೇಕಾದುದಾಗಿರುತ್ತದೆ. ನಾವು ನಿಂತಲ್ಲಿ ನೂರಾರು ಸೂಕ್ಷ್ಮ ಜೀವಗಳು ಬಿದ್ದಿರುತ್ತವೆ; ನಮ್ಮ ಅಲೆದಾಟದಿಂದ ಅವು ಕಸವಿಸಿಪಡುತ್ತವೆ. ಆ ಸ್ಥಳವು ಅವುಗಳದಿರುತ್ತದೆ. ಅಂದಬಳಿಕ ನಾವೇನು ಆತ್ಮಹತ್ಯ ಮಾಡಿಕೊಳ್ಳೋಣವೇ? ಅದರಿಂದ ಉದ್ದಿಷ್ಟವು ಸಾಧಿಸುವದಿಲ್ಲ. ದೇಹದ ಮೇಲಿನ ಆಸಕ್ತಿಯನ್ನು ಬಿಟ್ಟರೆ ಕೊನೆಗೆ ದೇಹವು ನಮ್ಮನ್ನು ಬಿಡುವದು. ಅನಾಸಕ್ತವಾದ ಈ ಸ್ವರೂಪವೇ ಸತ್ಯನಾರಾಯಣನು. ಇದರ ದರ್ಶನವು ತಾಳ್ಮೆಯಿಲ್ಲದೆ ಆಗುವದೇ ಇಲ್ಲ. ದೇಹವು ನಮ್ಮದಲ್ಲ. ಅದು ನಮಗೆ ದೇವರಿಂದ ಸಿಕ್ಕ ಕಾಣಿಕೆ ಎಂದು ತಿಳಿದು, ಅದರಿಂದಾಗುವ ಉಪಯೋಗವನ್ನು ಮಾಡಿಕೊಂಡು ನಾವು ನಮ್ಮ ಮಾರ್ಗವನ್ನು ಸಾಗಿಸುವಾ.

ನನಗೆ ಸುಲಭವಾಗಿ ಬರೆಯಬೇಕಾಗಿದ್ದಿತು ಆದರೆ ಬರೆದುದು ಕಠಿಣವಾಯಿತು. ಆದರೂ ಅಹಿಂಸೆಯ ಬಗ್ಗೆ ಸ್ವಲ್ಪಾದರೂ ವಿಚಾರ ಮಾಡಿದವರಿಗೆ ಇದನ್ನು ತಿಳಿದುಕೊಳ್ಳಲು ತೊಂದರೆಯೆನಿಸಲಾರದು.

ನಾನೀಗ ಹೇಳುವುದನ್ನು ಎಲ್ಲರೂ ಚನ್ನಾಗಿ ತಿಳಿದುಕೊಳ್ಳಬೇಕು. ಅಹಿಂಸೆಯ ಹೊರ್ತು ಸತ್ಯದ ಶೋಧವು ಅಶಕ್ಯವು. ಮುದ್ರೆಯ ಅಥವಾ ನುಣುಪಾದ ಒಂದು ನಾಣ್ಯದ ಎರಡೂ ಮಗ್ಗಲುಗಳು ಇದ್ದಂತೆ, ಅಹಿಂಸೆ, ಸತ್ಯ ಇವು ಓತಪ್ರೋತವಾಗಿವೆ. ಅದರಲ್ಲಿ ಮೆಲ್ಮೈ ಯಾವದು, ಬುಡಮೈ ಯಾವದು? ಆದರೂ ಅಹಿಂಸೆಯನ್ನು ಸಾಧನವೆಂದೂ ಸತ್ಯವನ್ನು ಸಾಧ್ಯವೆಂದೂ ತಿಳಿಯಬೇಕು. ಸಾಧನವು ನಮ್ಮ ಕೈಯೊಳಗಿನ ಮಾತು. ಆದುದರಿಂದ ಅಹಿಂಸೆಯು ಪರಮ ಧರ್ಮವಾಯಿತು. ಸತ್ಯವು ಪರಮೇಶ್ವರ ವಾಯಿತು. ' ಸಾಧನದ ಧ್ಯಾನದಲ್ಲಿ ಮಗ್ನರಾದರೆ ಸಾಧ್ಯದ ದರ್ಶನವು ಒಂದಿಲ್ಲೊಂದು ದಿವಸ ಆಗಿಯೇ ಆಗುವದು ' ಎಂದು ನಿಶ್ಚಯ ಮಾಡಿದರೆ ಇಡೀ ಜಗತ್ತನ್ನೇ ಗೆದ್ದಂತಾಯಿತು. ನಮ್ಮ ಮಾರ್ಗದಲ್ಲಿ ಎಷ್ಟೇ ತೊಡರು ಗಳು ಬರಲಿ; ಬಾಹ್ಯ ದೃಷ್ಟಿಯಿಂದ ನೋಡುವಾಗ ನಮಗೆ ಎಷ್ಟೇ ಸೋಲುಗಳು ಒದಗಿದಂತಾಗಲಿ, ಆದರೂ ನಾವು ವಿಶ್ವಾಸವನ್ನು ಬಿಡದೆ, ಒಂದೇ ಮಂತ್ರದನ್ನು ಜಪಿಸುವಾ. **ಸತ್ಯವು ಇದೆ. ಅದೇ ಇದೆ.** ಅದೇ ಒಂದು ಪರಮೇಶ್ವರನು. ಅದರ ಸಾಕ್ಷಾತ್ಕಾರ ಮಾಡಿಕೊಳ್ಳುವದಕ್ಕೆ ಒಂದೇ ಮಾರ್ಗವಿರುವದು. ಒಂದೇ ಸಾಧನವಿರುವದು. ಅದೆಂದರೆ ಅಹಿಂಸೆಯು. ಅದನ್ನು ನಾನು ಎಂದೂ ಬಿಡುವದಿಲ್ಲ. ಸತ್ಯರೂಪಿಯಾದ ಪರಮೇಶ್ವರನ ಹೆಸರಿನಿಂದ ಈ ಪ್ರತಿಜ್ಞೆಯನ್ನು ಮಾಡಿರುವದರಿಂದ ಅವನೇ ಇದನ್ನು ನಿರ್ವಹಿಸುವ ಬಲವನ್ನು ಕೊಡಲಿ.

---

## ೩ ಬ್ರಹ್ಮಚರ್ಯ

ತಾ. ೫–೮–೩೦
ಮಂಗಲ ಪ್ರಭಾತ

ನಮ್ಮ ವ್ರತಗಳಲ್ಲಿ ಮೂರನೆಯ ವ್ರತವು ಬ್ರಹ್ಮಚರ್ಯವು. ನಿಜ ವಾಗಿ ನೋಡಲು ಉಳಿದ ಎಲ್ಲ ವ್ರತಗಳೂ ಸತ್ಯವೊಂದರಿಂದಲೇ ಉತ್ಪನ್ನ

ವಾಗುತ್ತವೆ, ಸತ್ಯಕ್ಕಾಗಿಯೇ ಇರುತ್ತವೆ. ಸತ್ಯವನ್ನೇ ಆಶ್ರಯಿಸಿರುವವನು, ಅದರ ಉಪಾಸನೆಯನ್ನೇ ಮಾಡುತ್ತಿರುವವನು, ಬೇರೆ ಯಾವದಾದರೂ ವಸ್ತುವಿನ ಆರಾಧನೆಯನ್ನು ಮಾಡಿದರೆ ವ್ಯಭಿಚಾರಿಯೆಂದೆನಿಸುವನು. ಹೀಗಿರುವಾಗ ಅವನು ವಿಕಾರಗಳ ಆರಾಧನೆಯನ್ನು ಹೇಗೆ ಮಾಡುವನು ? ಪ್ರವೃತ್ತಿಗಳನ್ನೆಲ್ಲ ಸತ್ಯದ ದರ್ಶನಕ್ಕಾಗಿಯೇ ವ್ಯಯ ಮಾಡುವವನು ಪ್ರಜೋತ್ಪತ್ತಿಯ ಕಾರ್ಯದಲ್ಲಾಗಲಿ, ಗ್ರಹಸಂಸಾರವನ್ನು ನಡೆಯಿಸುವದರಲ್ಲಾಗಲಿ ಹೇಗೆ ಮನಸ್ಸು ಮಾಡಿಯಾನು ? ಭೋಗವಿಲಾಸದಿಂದ ಯಾರಿಗಾದರೂ ಸತ್ಯವು ದೊರೆತಿರುವದೆಂಬ ಉದಾಹರಣೆಯನ್ನು ಈಹೊತ್ತಿನ ವರೆಗೆ ನಾವು ಒಂದನ್ನೂ ಕಾಣೆವು.

ಅಹಿಂಸೆಯ ಆಚರಣೆಯ ವಿಷಯವನ್ನು ತೆಗೆದುಕೊಂಡರೆ ಅದರ ಪೂರ್ಣ ಪಾಲನೆಯು ಬ್ರಹ್ಮಚರ್ಯದ ಹೊರತು ಅಶಕ್ಯವು. ಅಹಿಂಸೆಯೆಂದರೇ ಸರ್ವವ್ಯಾಪೀ ಪ್ರೇಮವು. ಪುರುಷನು ಯಾವಳಾದರೊಬ್ಬ ಸ್ತ್ರೀಯಳಿಗೆ ಅಥವಾ ಸ್ತ್ರೀಯು ಯಾವನಾದರೊಬ್ಬ ಪುರುಷನಿಗೆ ತನ್ನ ಪ್ರೇಮವನ್ನು ಅರ್ಪಿಸಿದರೆಂದರೆ, ಅವರಿಬ್ಬರ ಹತ್ತಿರ ಏನು ಉಳಿಯುವದು ? 'ನಾವಿಬ್ಬರು ಮೊದಲು; ಉಳಿದವರೆಲ್ಲರು ಹಿಂದುಗಡೆ' ಎಂಬುದೇ ಈ ಪ್ರೇಮಾರ್ಪಣದ ಅರ್ಥವು. ಪತಿವ್ರತಾಸ್ತ್ರೀಯು ತನ್ನ ಗಂಡನ ಸಲುವಾಗಿಯೂ ಪತ್ನಿವ್ರತ ಪುರುಷನು ತನ್ನ ಹೆಂಡತಿಯ ಸಲುವಾಗಿಯೂ ಸರ್ವಸ್ವವನ್ನು ಹೋಮ ಮಾಡಲು ಸಿದ್ಧರಾಗುವರು. ಅಂದರೆ ಅವರಿಂದ ಸರ್ವವ್ಯಾಪಿ ಪ್ರೇಮದ ಪಾಲನವು ಆಗುವದೇ ಇಲ್ಲವೆಂಬುದು ಸ್ಪಷ್ಟವಾಗುವದು. ಇವರಿಗೆ ಎಲ್ಲ ವಿಶ್ವವನ್ನೇ ತಮ್ಮ ಕುಟುಂಬವನ್ನಾಗಿ ಮಾಡಿಕೊಳ್ಳಲಿಕ್ಕೆ ಬರುವದಿಲ್ಲ. ಏಕೆಂದರೆ ಅವರಿಗೆ ತಮ್ಮ ಬಳಿಯಲ್ಲಿ ತಮ್ಮದೆಂದು ತಿಳಿದುಕೊಂಡ ಒಂದು ಕುಟುಂಬವು ಪ್ರತ್ಯಕ್ಷವಿರುತ್ತದೆ. ಇಲ್ಲವೆ ಸಿದ್ಧವಾಗತೊಡಗಿರುತ್ತದೆ. ಅದರ ವೃದ್ಧಿಯಾದಷ್ಟು ಸರ್ವವ್ಯಾಪಿ ಪ್ರೇಮದೊಳಗೆ ತೊಂದರೆಯುಂಟಾಗುತ್ತದೆ. ಹೀಗಾಗುವದನ್ನು ನಾವು ಇಡಿ ಜಗತ್ತಿನಲ್ಲಿಯೇ ನೋಡುತಿದ್ದೇವೆ. ಆದುದರಿಂದ ಅಹಿಂಸಾವ್ರತದ ಪಾಲನ ಮಾಡುವವರಿಗೆ ವಿವಾಹವಾಗಲಿಕ್ಕೇ ಬರುವದಿಲ್ಲ. ಎಂದಮೇಲೆ ವಿವಾಹ ಬಾಹ್ಯವಿಕಾರಗಳ ವಿಷಯಕ್ಕಂತೂ ಕೇಳುವದೇನು ?

ಹೀಗಾದರೆ ಲಗ್ನಮಾಡಿಕೊಂಡು ಕುಳಿತವರ ಪಾಡೇನು ? ಅವರಿಗೆ ಸತ್ಯವು ಎಂದೂ ದೊರೆಯುವದಿಲ್ಲವೇ ? ಅವರು ಸರ್ವಾರ್ಪಣವನ್ನು ಎಂದೂ ಮಾಡಲಾರರೇ ? ಎಂದು ಕೇಳಿದರೆ, ಅವರ ಸಲುವಾಗಿಯೂ ಒಂದು ಮಾರ್ಗವನ್ನು ಶೋಧಿಸಲಾಗಿದೆ. ಅದು ಯಾವದೆಂದರೆ:- ವಿವಾಹಿತರೂ ಅವಿವಾಹಿತರಂತೆ ಆಗಿಬಿಡುವದು. ಈ ದಿಶೆಯಲ್ಲಿ ವಿಚಾರ ಮಾಡುವಾಗ ಇದರಷ್ಟು ಸುಂದರವಾದುದು ಬೇರೆ ಯಾವದೂ ನನ್ನ ಅನುಭವಕ್ಕೆ ಬಂದಿಲ್ಲ. ಈ ಸ್ಥಿತಿಯ ಅನುಭವವನ್ನು ತೆಗೆದುಕೊಂಡವರೇ ಇದಕ್ಕೆ ಸಾಕ್ಷಿಯಾಗಿರುವರು. ಇಂದಿನವರೆಗಂತೂ ಈ ಪ್ರಯೋಗದ ಸಫಲತೆಯು ಸಿದ್ಧವಾಗಿದೆಯೆಂದೇ ಹೇಳಬೇಕು. ವಿವಾಹಿತ ಸ್ತ್ರೀ ಪುರುಷರು ಒಬ್ಬರಿಗೊಬ್ಬರು ಅಣ್ಣ-ತಂಗಿಯರೆಂದು ತಿಳಿಯತೊಡಗಿದ ರೆಂದರೆ ಎಲ್ಲ ಉಪಾಧಿಗಳಿಂದಲೂ ಅವರು ಮುಕ್ತರಾಗುವರು. ಜಗತ್ತಿನೊಳಗಿರುವ ಸ್ತ್ರೀಯರೆಲ್ಲರೂ ಅಕ್ಕ-ತಂಗಿಯರು, ತಾಯಂದಿರು, ಮಕ್ಕಳು ಎಂಬ ಭಾವನೆಯೇ ಮನುಷ್ಯನನ್ನು ಒಮ್ಮೆಲೆ ಉನ್ನತಿಗೆ ಒಯ್ಯುವಂತಹದಿದೆ; ಬಂಧನದಿಂದ ಮುಕ್ತಮಾಡುವಂತಹದಿದೆ. ಇದರಿಂದ ಗಂಡ ಹೆಂಡಂದಿರಿಗೆ ಯಾವ ಕೊರತೆಯೂ ಇಲ್ಲ; ಇಷ್ಟೇ ಅಲ್ಲ. ತಮ್ಮ ಬಂಡವಾಳವನ್ನು ಹೆಚ್ಚಿಸುತ್ತಾರೆ. ವಿಶ್ವಕುಟುಂಬಿಗಳಾಗುತ್ತಾರೆ. ವಿಕಾರವೆಂಬ ಹೊಲಸನ್ನು ತೆಗೆದುಹಾಕುವದರಿಂದ, ಅವರ ಪ್ರೇಮವೂ ಹೆಚ್ಚಾಗುತ್ತದೆ. ವಿಕಾರವು ನಾಶವಾಗುವದರಿಂದ ಒಬ್ಬರಿಗೊಬ್ಬರ ಸೇವೆಯೂ ಚೆನ್ನಾಗಿಯೇ ಆಗುವದು. ಒಬ್ಬರಿಗೊಬ್ಬರ ನಡುವಿನ ಕಿಟಿಕಿಟಿಯ ಪ್ರಸಂಗಗಳೂ ಕಡಿಮೆಯಾಗುವವು. ಸ್ವಾರ್ಥಿಯಾದ, ಏಕಾಂಗಿಯಾದ ಪ್ರೇಮವಿದ್ದಲ್ಲಿ ಕಿಟಿಕಿಟಿಗೆ ಸಹ ಹೆಚ್ಚು ಆಸ್ಪದವು ದೊರೆಯುವದು.

ಮೇಲಿನ ಮುಖ್ಯ ವಿಚಾರವನ್ನು ಮಾಡಿದ ಮೇಲೆ, ಅದು ಹೃದಯದಲ್ಲಿ ನೆಟ್ಟಮೇಲೆ ಬ್ರಹ್ಮಚರ್ಯದಿಂದಾಗುವ ಶಾರೀರಿಕ ಲಾಭ, ವೀರ್ಯ ಲಾಭ ಮುಂತಾದವುಗಳು ತೀರ ಗೌಣವೆಂದೆನಿಸುವವು. ಬುದ್ಧಿಪೂರ್ವಕವಾಗಿ ಭೋಗವಿಲಾಸಕ್ಕಾಗಿ ವೀರ್ಯಹಾನಿಯನ್ನು ಮಾಡಿ, ಶರೀರವನ್ನು ಹಿಂಡಿ ಹಿಪ್ಪಿಮಾಡುವದು ಎಂಥ ಮೂರ್ಖತನವು ! ಸ್ತ್ರೀ-ಪುರುಷರಿಬ್ಬರ ವೀರ್ಯದ ಉಪಯೋಗವು ಶಾರೀರಿಕ ಮಾನಸಿಕ ಶಕ್ತಿಗಳೆರಡನ್ನೂ ಹೆಚ್ಚಿಸುವದಕ್ಕಾಗಿ ಇರುತ್ತದೆ. ಅದನ್ನು ವಿಷಯಭೋಗದಲ್ಲಿ ವೆಚ್ಚ

ಮಾಡುವದೆಂದರೆ ತೀರ ದುರುಪಯೋಗ ಮಾಡಿದಂತಾಗುವದು. ಹೀಗೆ ಮಾಡುವುದೆಂದರೆ ಅನೇಕ ರೋಗಗಳಿಗೆ ಆಶ್ರಯ ಕೊಟ್ಟಂತಾಗುವದು.

ಇಂತಹ ಬ್ರಹ್ಮಚರ್ಯವನ್ನು ಮನಸ್ಸಿನಿಂದಲೂ ವಾಣಿಯಿಂದಲೂ ದೇಹದಿಂದಲೂ ಪಾಲಿಸಬೇಕಾಗುವದು. ಎಲ್ಲ ವ್ರತಗಳ ವಿಚಾರವೂ ಹೀಗೆಯೇ ಇರುವುದು. ಶರೀರವನ್ನು ಆಧೀನದಲ್ಲಿಟ್ಟುಕೊಂಡಂತೆ ಕಾಣಿಸುವವನೂ ಮನಸ್ಸಿನಿಂದ ವಿಕಾರಗಳಿಗೆ ಉತ್ತೇಜನ ಕೊಡುವವನೂ ಮೂಢ ಮಿಥ್ಯಾಚಾರಿಯೆಂಬುದನ್ನು ನಾವು ಗೀತೆಯಲ್ಲಿ ನೋಡಿದ್ದೇವೆ. ಇದರ ಅನುಭವವೂ ಎಲ್ಲರಿಗುಂಟು. ಮನಸ್ಸನ್ನು ವಿಕಾರವಾಗಗೊಟ್ಟು, ಶರೀರವನ್ನು ವಶದಲ್ಲಿಟ್ಟುಕೊಳ್ಳಲಿಕ್ಕೆ ಪ್ರಯತ್ನ ಮಾಡುವದರಲ್ಲಿ ಹಾನಿಯೇ ಇರುತ್ತದೆ. ಕೊನೆಗೂ ಮನಸ್ಸಿದ್ದೆಡೆಗೆ ಶರೀರವು ಹೋಗದೆ ಇರುವದಿಲ್ಲ. ಇದರಲ್ಲಿಯ ಒಂದು ಭೇದವನ್ನು ತಿಳಿದುಕೊಳ್ಳುವದು ಅವಶ್ಯವಿರುತ್ತದೆ. ಮನಸ್ಸನ್ನು ವಿಕಾರಿಯಾಗಗೊಡುವುದು ಬೇರೆ; ಮನಸ್ಸು ಸ್ವತಃ ಅನಿಚ್ಛೆಯಿಂದ ಅಂದರೆ ಬಲಾತ್ಕಾರದಿಂದ ವಿಕಾರಿಯಾಗುವದು ಅಥವಾ ಆಗುತ್ತಿರುವದು ಬೇರೆ. ಆ ವಿಕಾರದಲ್ಲಿ ನಾವು ಸಹಾನುಭೂತಿಯುಳ್ಳವರಾಗದಿದ್ದರೆ, ಕೊನೆಗೆ ನಮಗೆ ಜಯವು ಸಿಕ್ಕೇಸಿಕ್ಕುವದು. ಶರೀರವು ವಶವಾಗುತ್ತದೆ. ಮನಸ್ಸು ಆಗುವದಿಲ್ಲ. ಇದನ್ನು ನಾವು ಕ್ಷಣಕ್ಷಣಕ್ಕೂ ನೋಡುತ್ತೇವೆ. ಶರೀರವನ್ನು ಮೊದಲು ವಶಮಾಡಿಕೊಂಡು ಆಮೇಲೆ ಮನಸ್ಸನ್ನು ವಶಪಡಿಸಿಕೊಳ್ಳಲಿಕ್ಕೆ ನಿತ್ಯ ಪ್ರಯತ್ನ ಮಾಡಬೇಕು. ಅಂದರೆ ನಾವು ನಮ್ಮ ಕರ್ತವ್ಯವನ್ನು ಮಾಡಿದಂತಾಗುವದು. ಮನಸ್ಸಿಗೆ ಅಧೀನರಾದೆವೆಂದರೆ ಶರೀರ ಮತ್ತು ಮನಸ್ಸು ಇವುಗಳಲ್ಲಿ ಭೇದ ಉಂಟಾಗಿ, ಮಿಥ್ಯಾಚಾರಕ್ಕೆ ಪ್ರಾರಂಭವಾಗುವದು. ಮನೋವಿಕಾರಗಳನ್ನು ತಡೆದು ಹಿಡಿಯುವವರೆಗೆ ಮನಸ್ಸು ಮತ್ತು ಶರೀರಗಳೆರಡೂ ಒಂದೇ ದಿಶೆಯಲ್ಲಿ ಕೂಡಿ ಹೋಗುತ್ತವೆಂದು ಹೇಳಬಹುದು.

ಬ್ರಹ್ಮಚರ್ಯದ ಪಾಲನವು ಬಹಳ ಕಠಿನವಿಷ್ಟೇ ಅಲ್ಲ, ಅಶಕ್ಯವೆಂದೇ ತಿಳಿಯುತ್ತಾರೆ. ಇದರ ಕಾರಣವನ್ನು ಶೋಧಿಸಿದರೆ ಬ್ರಹ್ಮಚರ್ಯದ ಅರ್ಥವನ್ನು ಸಂಕುಚಿತ ಮಾಡಿರುವರೆಂದು ಕಂಡುಬರುತ್ತದೆ. ಜನನೇಂದ್ರಿಯ ವಿಕಾರದ ನಿರೋಧವೆಂದರೆ ಮಾತ್ರ ಬ್ರಹ್ಮಚರ್ಯದ ಪಾಲನವೆಂದು ಸಾಮಾನ್ಯರ ತಿಳಿವಳಿಕೆ. ಇದು ಏಕಾಂಗಿಯಾಗಿಯೂ

ತಪ್ಪಾಗಿಯೂ ಇರುತ್ತದೆಂದು ನನಗೆ ಅನಿಸುತ್ತದೆ. ಎಲ್ಲ ವಿಷಯಗಳ ನಿರೋಧನವೇ ಬ್ರಹ್ಮಚರ್ಯವು. ಉಳಿದ ಇಂದ್ರಿಯಗಳನ್ನು ಬೇಕಾದಲ್ಲಿ ಹರಿಬಿಟ್ಟು, ಒಂದೇ ಇಂದ್ರಿಯವನ್ನು ತಡೆಯುವ ಪ್ರಯತ್ನ ಮಾಡುವವನು ವ್ಯರ್ಥ ಪ್ರಯತ್ನ ಮಾಡುತ್ತಾನೆಂಬದರಲ್ಲಿ ಸಂಶಯವೇನಿದೆ? ವಿಕಾರವನ್ನುಂಟು ಮಾಡುವ ಮಾತುಗಳನ್ನು ಕಿವಿಯಿಂದ ಕೇಳುವದು, ವಿಕಾರವನ್ನುಂಟು ಮಾಡುವ ದೃಶ್ಯಗಳನ್ನು ಕಣ್ಣಿನಿಂದ ನೋಡುವದು, ವಿಕಾರೋತ್ತೇಜಕವಾದ ಪದಾರ್ಥಗಳನ್ನು ನಾಲಿಗೆಯಿಂದ ಸ್ವಾದಿಸುವದು, ವಿಕಾರೋತ್ತೇಜಕವಾದ ವಸ್ತುಗಳನ್ನು ಕೈಯಿಂದ ಸ್ಪರ್ಶಿಸುವದು ಇವೆಲ್ಲವನ್ನು ಮಾಡುತ್ತಿರುವಾಗಲೂ ಜನನೇಂದ್ರಿಯವನ್ನು ನಿಗ್ರಹಮಾಡುವ ಇಚ್ಛೆಯನ್ನು ಹಿಡಿಯುವದೆಂದರೆ ಬೆಂಕಿಯಲ್ಲಿ ಕೈಹಾಕಿ ಸುಡಬಾರದೆಂದು ಪ್ರಯತ್ನಮಾಡುತ್ತಿದ್ದಂತೆಯೇ ಸರಿ. ಆದುದರಿಂದ ಜನನೇಂದ್ರಿಯವನ್ನು ತಡೆಯಲಿಚ್ಛಿಸುವವನು ಎಲ್ಲ ಇಂದ್ರಿಯಗಳನ್ನೂ ಅವುಗಳ ವಿಕಾರದಿಂದ ನಿಗ್ರಹಿಸುವ ನಿಶ್ಚಯವನ್ನು ಮಾಡಲೇ ಬೇಕು. ಬ್ರಹ್ಮಚರ್ಯದ ಸಂಕುಚಿತವಾದ ವ್ಯಾಖ್ಯೆಯಿಂದ ಹಾನಿಯಾಗಿರುತ್ತದೆಂದು ನನಗೆ ಯಾವಾಗಲೂ ಎನಿಸುತ್ತದೆ. ನಾವು ಎಲ್ಲ ಇಂದ್ರಿಯಗಳನ್ನೂ ಒಮ್ಮೆಲೇ ವಶಮಾಡಿಕೊಳ್ಳುವ ಅಭ್ಯಾಸವನ್ನು ಮಾಡಿದರೆ, ಜನನೇಂದ್ರಿಯವನ್ನು ವಶಮಾಡಿಕೊಳ್ಳುವ ಪ್ರಯತ್ನವು ಬೇಗನೇ ಸಫಲವಾಗುವದು. ಇದರಲ್ಲಿ ಮುಖ್ಯವಾದದ್ದು ಸ್ವಾದೇಂದ್ರಿಯವು. ಆದ್ದರಿಂದಲೇ ನಾವು ಸ್ವಾದೇಂದ್ರಿಯ ಸಂಯಮನಕ್ಕೆ ಬೇರೆ ಸ್ಥಾನವನ್ನು ಕೊಟ್ಟಿರುತ್ತೇವೆ. ಅದರ ವಿಚಾರವನ್ನು ಹಿಂದಿನಿಂದ ಮಾಡುವಾ.

ಬ್ರಹ್ಮಚರ್ಯದ ಮುಖ್ಯ ಅರ್ಥವನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು. ಬ್ರಹ್ಮಚರ್ಯವೆಂದರೆ ಬ್ರಹ್ಮನ–ಸತ್ಯದ–ಶೋಧದಲ್ಲಿ ಚರ್ಯಾ ಎಂದರೆ ಅದಕ್ಕೆ ಅನುಸರಿಸಿಯೇ ಆಚರಣೆಯು. ಈ ಮೂಲ ಅರ್ಥದಿಂದ ಸರ್ವೇಂದ್ರಿಯ ಸಂಯಮವೆಂಬ ವಿಶೇಷಾರ್ಥವು ಹೊರಡುತ್ತದೆ. ಕೇವಲ ಜನನೇಂದ್ರಿಯ ಸಂಯಮವೆಂಬ ಅರ್ಥವನ್ನು ಮರತೇ ಬಿಡುವಾ.

---

# ೪ ಅಸ್ವಾದ

ತಾ॥ ೧೨ - ೮ - ೩೦

ಮಂಗಲ ಪ್ರಭಾತ

ಈ ವ್ರತಕ್ಕೂ ಬ್ರಹ್ಮಚರ್ಯಕ್ಕೂ ತೀರ ನಿಕಟ ಸಂಬಂಧವಿದೆ. ಈ ವ್ರತವನ್ನು ಚೆನ್ನಾಗಿ ವಶಮಾಡಿಕೊಂಡರೆ, ಬ್ರಹ್ಮಚರ್ಯವು ಅಂದರೆ ಜನನೇಂದ್ರಿಯ ಸಂಯಮನವು ಅತಿ ಸುಲಭವಾಗಿ ಆಗುವದು. ಸಾಮಾನ್ಯವಾಗಿ ವ್ರತಗಳಲ್ಲಿ ಅಸ್ವಾದಕ್ಕೆ ಬೇರೆ ಸ್ಥಾನವನ್ನು ಕೊಟ್ಟಿರುವದಿಲ್ಲ. ದೊಡ್ಡ ದೊಡ್ಡ ಮುನಿಶ್ರೇಷ್ಠರಿಗೆ ಸಹ ಸ್ವಾದವನ್ನು ಗೆಲ್ಲುವದಾಗದ್ದರಿಂದ ಈ ವ್ರತಕ್ಕೆ ಬೇರೆ ಸ್ಥಾನವು ದೊರೆಯಲಿಲ್ಲ. ಇದೇಸೋ ನನಗೆ ಅನುಮಾನದ ಮಾತು. ಅದು ಹೀಗೆಯೇ ಇರಲಿ ಅಥವಾ ಇರದೇ ಇರಲಿ, ನಾವು ಈ ವ್ರತಕ್ಕೆ ಸ್ವತಂತ್ರಸ್ಥಾನವನ್ನು ಕೊಟ್ಟಕಾರಣ ಅದರ ವಿಚಾರವನ್ನು ಸ್ವತಂತ್ರ ರೀತಿಯಿಂದಲೇ ಮಾಡಬೇಕಾಗಿರುತ್ತದೆ.

ಅಸ್ವಾದವೆಂದರೆ ಸ್ವಾದವನ್ನು ತೆಗೆದುಕೊಳ್ಳದೆ ಇರುವದು. ಸ್ವಾದವೆಂದರೆ ರಸವು. ಔಷಧವನ್ನು ತೆಗೆದುಕೊಳ್ಳುವಾಗ ‘ ಅದು ರುಚಿಕರವಿದೆಯೋ ಹೇಗೆ? ’ ಎಂಬುದರ ವಿಚಾರವನ್ನು ಮಾಡದೆ ‘ ಶರೀರಕ್ಕೆ ಆವಶ್ಯಕತೆಯಿದೆ ’ ಎಂದು ತಿಳಿದು, ಅದರ ಪ್ರಮಾಣದಲ್ಲಿ ಅದನ್ನು ಸೇವಿಸುವಂತೆ ಅನ್ನವನ್ನು ಸಹ ಸೇವಿಸಬೇಕು. ತಿನ್ನುವ ಪದಾರ್ಥಗಳೆಲ್ಲವೂ ಅನ್ನವೆನಿಸುವವು. ಆದುದರಿಂದ ಇಲ್ಲಿ ಹಾಲು, ಹಣ್ಣುಗಳ ಸಮಾವೇಶವೂ ಆಗುತ್ತದೆ. ಇನ್ನು ಅದನ್ನು ಹೆಚ್ಚಾಗಿ ತೆಗೆದುಕೊಂಡರೆ ಲಾಭವೇನೂ ಇಲ್ಲ. ಇಷ್ಟೇ ಅಲ್ಲ ಹಾನಿಯಾಗುವದು ಮಾತ್ರ ಖಂಡಿತ. ಅನ್ನದ ವಿಚಾರವಾದರೂ ಇದರಂತೆಯೇ. ಕಾರಣ ಯಾವದೇ ಪದಾರ್ಥವನ್ನು ರುಚಿಗಾಗಿ ತಿನ್ನುವದು ವ್ರತಭಂಗವೆನಿಸುವದು. ರುಚಿಹತ್ತುವ ಪದಾರ್ಥವನ್ನು ಹೆಚ್ಚಿಗೆ ಸ್ವೀಕರಿಸುವದಂತೂ ವ್ರತಭಂಗವೇ. ಇದರ ಮೇಲಿಂದ ಗೊತ್ತಾಗುವದೇನಂದರೆ ಪದಾರ್ಥದ ರುಚಿಯನ್ನು ಹೆಚ್ಚಿಸಲಿಕ್ಕಾಗಲಿ, ಬದಲಿಸಲಿಕ್ಕಾಗಲಿ, **ಅಸ್ವಾದವನ್ನು ಕಡಿಮೆಮಾಡುವದಕ್ಕೆ**ಯಾಗಲಿ

ಅದರಲ್ಲಿ ಉಪ್ಪನ್ನು ಕೂಡಿಸುವದು ಸಹ ವ್ರತಭಂಗವಾಗುವದು. ಆದರೆ ಅನ್ನದಲ್ಲಿ ಇಂತಿಷ್ಟು ಪ್ರಮಾಣದಲ್ಲಿ ಉಪ್ಪು ಇರಬೇಕೆಂದು ನಮಗೆ ಗೊತ್ತಿದ್ದರೆ ಅದರಲ್ಲಿ ಉಪ್ಪು ಹಾಕುವದು ವ್ರತಭಂಗವಲ್ಲ. ಶರೀರ ಪೋಷಣೆಗೆ ಅವಶ್ಯವಿಲ್ಲದಿದ್ದರೂ ಮನಸ್ಸನ್ನು ಮೋಸಗೊಳಿಸುವದಕ್ಕೆ ಆವಶ್ಯಕತೆಯ ನೆವಮಾಡಿ ಯಾವದಾದರೊಂದು ವಸ್ತುವನ್ನು ಅದರಲ್ಲಿ ಕೂಡಿಸುವದೂ ಮಿಥ್ಯಾಚಾರವೆಂದೇ ಎನಿಸಿಕೊಳ್ಳುವದು.

ಈ ರೀತಿಯಿಂದ ವಿಚಾರಮಾಡಿದರೆ ನಾವು ಸೇವಿಸುವ ಅನೇಕ ಪದಾರ್ಥಗಳು—ಶರೀರ ಪೋಷಣೆಗೆ ಅವಶ್ಯವಿರದಿದ್ದರೆ-ತ್ಯಾಜ್ಯಗಳಾಗುತ್ತವೆಂಬದು ನಮಗೆ ಗೊತ್ತಾಗುತ್ತದೆ. ಇದರಿಂದ ಸುಲಭವಾಗಿಯೆ ಅನೇಕ ವಸ್ತುಗಳ ತ್ಯಾಗವಾಗಿ, ಅವುಗಳಿಂದ ಉಂಟಾಗುವ ವಿಕಾರಗಳೆಲ್ಲವೂ ನಾಶವಾಗುವವು. "ಒಂದು ಒಲೆ ಹೂಡಿದರೆ ಹದಿನೆಂಟು ಸಾಮಾನುಗಳು ಬೇಕು." "ಹೊಟ್ಟೆಯು ಬಿಟ್ಟಿಯನ್ನೂ ಮಾಡಿಸುವದು, ಡೊಳ್ಳು ಬಾರಿಸಲೂ ಹಚ್ಚುವದು." ಈ ಮೊದಲಾದ ಉಕ್ತಿಗಳಲ್ಲಿ ತುಂಬ ರಹಸ್ಯವು ತುಂಬಿರುತ್ತದೆ. ವ್ರತದ ದೃಷ್ಟಿಯಿಂದ ಅನ್ನವನ್ನು ಆರಿಸುವದು ತೀರ ಅಶಕ್ಯವಾಗಿ ಬಿಟ್ಟಿರುತ್ತದೆ. ಚಿಕ್ಕಂದಿನಿಂದಲೇ ತಾಯಿತಂದೆಗಳು ಅಂಧ-ಪ್ರೇಮದಿಂದ ಅನೇಕ ಪ್ರಕಾರದ ರುಚಿಗಳನ್ನು ಸೇವನ ಮಾಡಿಸಿ, ಶರೀರವನ್ನು ಕೆಡಿಸಿಬಿಟ್ಟಿರುತ್ತಾರೆ. ಮತ್ತು ನಾಲಿಗೆಯನ್ನು ನಾಯಿಯಂತೆ ಮಾಡಿಬಿಟ್ಟಿರುತ್ತಾರೆ. ಇದರಿಂದ ವಿವೇಕಿಯಾಗುವ ಸಂಸಾರವು ಶರೀರದಿಂದ ರೋಗವುಳ್ಳದ್ದೂ, ಸ್ವಾದದೃಷ್ಟಿಯಿಂದ ಮಹಾವಿಕಾರಗಳುಳ್ಳದ್ದೂ ಆಗುವದು. ಇದರ ಕೆಟ್ಟ ಪರಿಣಾಮವನ್ನು ನಾವು ಅಡಿಗಡಿಗೆ ಅನುಭವಿಸುತ್ತೇವೆ. ವೈದ್ಯ, ಡಾಕ್ಟರರ ಆಶ್ರಯವನ್ನು ಹುಡುಕುತ್ತೇವೆ. ಶರೀರವನ್ನೂ ಇಂದ್ರಿಯಗಳನ್ನೂ ವಶದಲ್ಲಿ ಇಟ್ಟುಕೊಳ್ಳುವದರ ಬದಲು ಅವುಗಳ ಗುಲಾಮರಾಗಿ ಅವಯವಹೀನರಂತೆ ಆಗಿಬಿಡುವ ಸಂದರ್ಭವೊದಗುತ್ತದೆ. ಒಬ್ಬ ಅನುಭವಿಕ ವೈದ್ಯನು "ಜಗತ್ತಿನಲ್ಲಿ ನಿರೋಗಿಯಾದ ಒಬ್ಬ ಮನುಷ್ಯನನ್ನೂ ನಾನು ನೋಡಿಲ್ಲ" ಎಂದು ಹೇಳಿದ್ದಾನೆ. ಸ್ವಲ್ಪ ಸ್ವಾದವನ್ನು ಸೇವಿಸಿದ ಕೂಡಲೆ ಶರೀರವು ಭ್ರಷ್ಟವಾಗುವದು. ಮತ್ತು ಆಗಿನಿಂದಲೇ ಆ ಶರೀರದ ಸಲುವಾಗಿ ಉಪವಾಸದ ಆವಶ್ಯಕತೆಯು ಉತ್ಪನ್ನವಾಗುವದು.

ಈ ವಿಚಾರಶ್ರೇಣಿಯಿಂದ ಯಾರೂ ಗಾಬರಿಯಾಗುವ ಕಾರಣವಿಲ್ಲ. ಅಸ್ವಾದವ್ರತದ ಉಗ್ರಸ್ವರೂಪವನ್ನು ನೋಡಿ ಯಾರೂ ಅದನ್ನು ಬಿಟ್ಟು ಬಿಡುವ ಕಾರಣವೂ ಇಲ್ಲ. ನಾವು ಯಾವದಾದರೊಂದು ವ್ರತವನ್ನು ತೆಗೆದುಕೊಂಡ ಕೂಡಲೆ ಆ ವ್ರತವನ್ನು ಸಂಪೂರ್ಣವಾಗಿ ಪಾಲಿಸುತ್ತೇವೆಂದು ಅರ್ಥವಲ್ಲ. ವ್ರತವನ್ನು ತೆಗೆದುಕೊಳ್ಳುವದೆಂದರೆ ಅದರ ಸಂಪೂರ್ಣ ಪಾಲನ ಮಾಡಲಿಕ್ಕೆ ಪ್ರಾಮಾಣಿಕತನದಿಂದ ಮನಸ್ಸಿನಿಂದಲೂ ವಚನದಿಂದಲೂ ಕರ್ಮದಿಂದಲೂ ಆಜನ್ಮ ದೃಢವಾದ ಪ್ರಯತ್ನವನ್ನು ಮಾಡುವದು. ಯಾವದಾದರೊಂದು ವ್ರತವು ಕಠಿನವೆಂದು ಅದರ ವ್ಯಾಖ್ಯೆಯನ್ನು ತಿಳಿಗೇಡಿತನದಿಂದ ಮಾಡಿ ಮನಸ್ಸನ್ನು ವಂಚಿಸಬಾರದು. ನಮ್ಮ ಅನುಕೂಲತೆಗಾಗಿ ಆದರ್ಶವನ್ನು ಕೆಳಕ್ಕೆ ಜಗ್ಗುವದರಲ್ಲಿ ಅಸತ್ಯವಿರುತ್ತದೆ; ನಮ್ಮ ಪತನವಿರುತ್ತದೆ. ಆದರ್ಶವನ್ನು ಸ್ವತಂತ್ರ ರೀತಿಯಿಂದ ತಿಳಿದುಕೊಂಡು, ಅದನ್ನು ಸಾಧಿಸುವದು ಎಷ್ಟೇ ಕಠಿನವಿದ್ದರೂ ಅದನ್ನು ಮುಟ್ಟಲಿಕ್ಕೆ ತಲೆ ಒಡಕೊಂಡು ಪ್ರಯತ್ನ ಮಾಡುವದರಲ್ಲಿಯೇ ಪರಮ ಅರ್ಥವಿದೆ—ಪುರುಷಾರ್ಥವಿದೆ. (ಪುರುಷ ಶಬ್ದದ ಅರ್ಥವನ್ನು ಕೇವಲ ನರನೆಂದು ಮಾಡದೆ, ಅದರ ಮೂಲ ಅರ್ಥವನ್ನು ಮಾಡಬೇಕು. ಪುರದಲ್ಲಿ ಅಂದರೆ ಶರೀರದಲ್ಲಿ ಇರುವವನೇ ಪುರುಷನು. ಈ ಪ್ರಕಾರ ಅರ್ಥಮಾಡುವದರಿಂದ ಪುರುಷಾರ್ಥ ಶಬ್ದದ ಉಪಯೋಗವು ಸ್ತ್ರೀ ಪುರುಷರಿಬ್ಬರ ಸಲುವಾಗಿಯೂ ಆಗಬಲ್ಲದು.) ಸಂಪೂರ್ಣ ರೀತಿಯಿಂದ ತ್ರಿಕಾಲದಲ್ಲಿಯೂ ಮಹಾವ್ರತಗಳನ್ನು ಪಾಲಿಸಲಿಕ್ಕೆ ಸಾಮರ್ಥ್ಯವಿದ್ದವನಿಗೆ ಈ ಜಗತ್ತಿನಲ್ಲಿ ಮಾಡತಕ್ಕದು ಏನೂ ಇರುವದಿಲ್ಲ. ಅವನೇ ಭಗವಾನನು, ಮುಕ್ತನು. ನಾವಂತೂ ಅಲ್ಪ ಮುಮುಕ್ಷುಗಳು, ಜಿಜ್ಞಾಸುಗಳು, ಸತ್ಯದ ಆಗ್ರಹವನ್ನು ಹಿಡಿಯುವವರು, ಅದರ ಶೋಧದ ಸಲುವಾಗಿ ಜೀವಿಸುತ್ತೇವೆ. ಗೀತೆಯ ಭಾಷೆಯಲ್ಲಿ ಹೇಳುವದೆಂದರೆ " ಸಾವಕಾಶವಾದರೂ ಅತಂದ್ರಿತ ಪ್ರಯತ್ನವನ್ನು ಮಾಡುತ್ತಲೇ ಇರುವಾ." ನಾವು ಹೀಗೆ ಮಾಡುವದರಿಂದ ಎಂದಾದರೊಂದು ದಿವಸ ಈಶ್ವರನ ಅನುಗ್ರಹಕ್ಕೆ ಪಾತ್ರರಾಗುವೆವು. ಆಗ ನಮ್ಮ ವಿಷಯರಸಗಳೆಲ್ಲ ಒಣಗಿ ಹೋಗುವವು.

ಅಸ್ವಾದ ವ್ರತದ ಮಹತ್ವವು ನಮಗೆ ತಿಳಿದಿದ್ದರೆ ನಾವು ಅದನ್ನು ಪಾಲಿಸುವದಕ್ಕಾಗಿ ಹೊಸ ಪ್ರಯತ್ನಗಳನ್ನು ಮಾಡಬೇಕು. ಅದರ

ಸಲುವಾಗಿ ಇಪ್ಪತ್ತುನಾಲ್ಕು ತಾಸೂ ತಿನ್ನುವ ವಸ್ತುಗಳ ವಿಚಾರವನ್ನು ಮಾಡುವ ಆವಶ್ಯಕತೆಯಿರುವದಿಲ್ಲ. ಆದರೆ ಸಾವಧಾನದ ಮತ್ತು ಜಾಗರೂಕತೆಯ ಆವಶ್ಯಕತೆಯು ಬಹಳವಾಗಿರುತ್ತದೆ. ಹೀಗೆ ಮಾಡುವದರಿಂದ ಸ್ವಲ್ಪ ಸಮಯದಲ್ಲಿಯೇ ನಾವು ರುಚಿಗಾಗಿ ಯಾವದನ್ನು ತಿನ್ನುತ್ತೇವೆ, ಶರೀರ ಪೋಷಣೆಗಾಗಿ ಯಾವದನ್ನು ತಿನ್ನುತ್ತೇವೆಂಬದು ಗೊತ್ತಾಗುವದು. ಹೀಗೆ ಗೊತ್ತಾದಬಳಿಕ ನಾವು ಸ್ವಾದವನ್ನು ಕಡಿಮೆ ಮಾಡುತ್ತಲೇ ಹೋಗಬೇಕಾಗುವದು. ಈ ದೃಷ್ಟಿಯಿಂದ ವಿಚಾರ ಮಾಡುವಾಗ ಅಸ್ವಾದ ವೃತ್ತಿಯಿಂದ ಏಕತ್ರ ಅಡಿಗೆಯು ಆಗುತ್ತಿದ್ದರೆ ಅದು ಬಹಳ ಅನುಕೂಲವಾಗುತ್ತದೆ. ಅಲ್ಲಿ ನಾವು ದಿನಾಲು ಏನು ಊಟಮಾಡಬೇಕು, ಏನು ಅಡಿಗೆ ಮಾಡಬೇಕು ಎಂಬುದರ ವಿಚಾರ ಮಾಡಬೇಕಾಗುವದಿಲ್ಲ. ಆದರೆ ಅಲ್ಲಿ ಸಿದ್ಧವಾದ– ನಾವು ತ್ಯಾಜ್ಯವೆಂದು ತಿಳಿಯದ-ಅಡಿಗೆಯನ್ನು ಈಶ್ವರನ ಅನುಗ್ರಹವೆಂದು ತಿಳಿದು, ಅದರ ವಿಷಯಕ್ಕೆ ಮನಸ್ಸಿನಲ್ಲಿ ಏನೂ ಹೆಸರಿಡದೆ, ಸಂತೋಷದಿಂದ ಶರೀರಕ್ಕೆ ಅವಶ್ಯವಿದ್ದಷ್ಟು ಊಟ ಮಾಡಿ ಏಳಬೇಕು. ಹೀಗೆ ಮಾಡುವವನು ಸುಲಭವಾಗಿ ಅಸ್ವಾದವ್ರತವನ್ನು ಪಾಲಿಸುತ್ತಾನೆ. ಏಕತ್ರ ಅಡಿಗೆ ಮಾಡುವವನು ನಮ್ಮ ಮೇಲಿನ ಭಾರವನ್ನು ಕಡಿಮೆಮಾಡಿ, ನಮ್ಮ ವ್ರತದ ರಕ್ಷಕನಾಗುತ್ತಾನೆ. ರುಚಿ ಮಾಡುವ ದೃಷ್ಟಿಯಿಂದ ಅವನೇನು ಅಡಿಗೆಯನ್ನು ಮಾಡುವದಿಲ್ಲ. ಕೇವಲ ಸಮಾಜದ ಶರೀರ ಪೋಷಣೆಯ ಸಲುವಾಗಿಯೇ ಅಡಿಗೆಯನ್ನು ಸಿದ್ಧಮಾಡುವನು. ನಿಜವಾಗಿ ನೋಡಲು ಆದರ್ಶ ಸ್ಥಿತಿಯಲ್ಲಿ ಅಗ್ನಿಯ ಉಪಯೋಗವು ತೀರ ಕಡಿಮೆಯಾಗುವುದು. ಅಗ್ನಿಯ ಸಹಾಯದ ಆವಶ್ಯಕತೆಯೆ ಇಲ್ಲವೆಂದರೂ ನಡೆಯುವದು. ಸೂರ್ಯರೂಪಿಯಾದ ಮಹಾಗ್ನಿಯು ಪಕ್ವ ಮಾಡಿದ ಪದಾರ್ಥಗಳಲ್ಲಿಯೇ ನಾವು ನಮ್ಮ ಅನ್ನವನ್ನು ಹುಡುಕಬೇಕು. ಹೀಗೆ ವಿಚಾರ ಮಾಡಲು ಮನುಷ್ಯಪ್ರಾಣಿಯು ಫಲಾಹಾರಿಯೆಂದು ಸಿದ್ಧವಾಗುತ್ತದೆ. ಆದರೆ ಇಲ್ಲಿ ಇಷ್ಟು ಆಳವಾದ ವಿಚಾರ ಮಾಡುವ ಕಾರಣವಿಲ್ಲ. ಇಲ್ಲಿ ಅಸ್ವಾದ ವ್ರತವೆಂದರೇನು, ಅದರಲ್ಲಿ ತೊಂದರೆಗಳೇನಿವೆ? ಏನು ಇರುವದಿಲ್ಲ? ಅದಕ್ಕೂ ಬ್ರಹ್ಮಚರ್ಯಕ್ಕೂ ಎಷ್ಟು ನಿಕಟ ಸಂಬಂಧವಿದೆ? ಇವೇ ಮೊದಲಾದ ಮಾತುಗಳ ಬಗ್ಗೆ ವಿಚಾರಮಾಡುವದಿತ್ತು. ಇದಿಷ್ಟು ಮನಸ್ಸಿನಲ್ಲಿ ನೆಟ್ಟು ಎಲ್ಲರೂ ಯಥಾಶಕ್ತಿಯಾಗಿ ಈ ವ್ರತವನ್ನು

ಸಂಪೂರ್ಣ ರೀತಿಯಿಂದ ಪಾಲನಮಾಡುವ ಶುಭಪ್ರಯತ್ನವನ್ನು ಮಾಡಬೇಕು.

---

## ೫ ಅಸ್ತೇಯ

ತಾ. ೧೯-೮-೩೦
ಮಂಗಲ ಪ್ರಭಾತ

ಈಗ ನಾವು ಅಸ್ತೇಯ ವ್ರತಕ್ಕೆ ಬರುತ್ತೇವೆ. ಆಳವಾಗಿ ವಿಚಾರ ಮಾಡಲು ಎಲ್ಲ ವ್ರತಗಳು ಸತ್ಯ, ಅಹಿಂಸೆ ಇವುಗಳಲ್ಲಿಯೇ ಅಥವಾ ಸತ್ಯವೊಂದರ ಹೊಟ್ಟೆಯಲ್ಲಿಯೇ ಅಡಕವಾಗಿರುತ್ತವೆಂದು ಗೊತ್ತಾಗುವುದು. ಅದನ್ನು ಹೀಗೆ ತೋರಿಸಬಹುದು:-




ಸತ್ಯದೊಳಗಿಂದಲೆ ಅಹಿಂಸೆಯು ಹೊರಡುತ್ತದೆಂದು ಸಿದ್ಧಮಾಡಿ ತೋರಿಸಬಹುದು; ಇಲ್ಲವೆ ಸತ್ಯ, ಅಹಿಂಸೆಗಳನ್ನು ಜೊತೆಯಲ್ಲಿಯೇ ಎಣಿಸಬಹುದು. ಇವೆರಡೂ ಒಂದೇ ಇರುತ್ತವೆ. ಆದರೂ ನನ್ನ ಮನಸ್ಸು ಮೊದಲನೆಯದರ ಕಡೆಗೇ ಒಲೆಯುತ್ತದೆ. ಮತ್ತು ಅಂತ್ಯಸ್ಥಿತಿಯು ಜೊತೆಯಿಂದ–ದ್ವಂದ್ವದಿಂದ ಅತೀತವಾಗಿರುತ್ತದೆ. ಆ ಸ್ಥಿತಿಯಲ್ಲಿ ಶ್ರೇಷ್ಠವಾದ ಸತ್ಯವೊಂದೇ ಉಳಿಯುತ್ತದೆ. ಸತ್ಯವು ಸಾಧ್ಯವಿರುತ್ತದೆ. ಅಹಿಂಸೆಯು ಸಾಧನವಿರುತ್ತದೆ. ಅಹಿಂಸೆಯೆಂದರೆ ಏನೆಂಬುದು ನಮಗೆ ಗೊತ್ತಾಗುತ್ತದೆ; ಆದರೆ ಅದರ ಪಾಲನವು ಕಠಿನವಿದೆ. ಸತ್ಯವನ್ನೇನೋ ಅಂಶಮಾತ್ರದಿಂದ ತಿಳಿಯುತ್ತೇವೆ. ಅಹಿಂಸೆಯ ವ್ರತವನ್ನು ಸಂಪೂರ್ಣ

ಪಾಲನಮಾಡುವದು ಕಠಿಣವಿದ್ದಂತೆಯೇ ಸತ್ಯವನ್ನು ಸಂಪೂರ್ಣ ತಿಳಿಯುವದು ಈ ದೇಹಿಗಳಿಗೆ ಕಠಿನವಿದೆ.

ಅಸ್ತೇಯವೆಂದರೆ ಕಳವು ಮಾಡದೆ ಇರುವದು. ಕಳವು ಮಾಡುವವನು, ಸತ್ಯವನ್ನು ಅರಿತವನು ಇಲ್ಲವೆ ಪ್ರೇಮ ಧರ್ಮವನ್ನು ಪಾಲಿಸುವವನು ಎಂದು ಯಾರೂ ಹೇಳುವದಿಲ್ಲ. ಆದರೂ ನಾವು ಕಳ್ಳತನವನ್ನು ಸ್ವಲ್ಪವಿಲ್ಲ ಸ್ವಲ್ಪು ತಿಳಿದಾಗಲಿ, ತಿಳಿಯದೆಯಾಗಲಿ, ಮಾಡುತ್ತೇವೆ. ಹೆರವರದನ್ನು ಅಪ್ಪಣೆಯಿಲ್ಲದೆ ತೆಗೆದುಕೊಳ್ಳುವದೇನೋ ಕಳವು ಅಹುದೇ ಅಹುದು. ತನ್ನದೆಂದು ತಿಳಿಯುವದನ್ನೂ ಮನುಷ್ಯನು ಕಳವು ಮಾಡುತ್ತಾನೆಂಬುದನ್ನು ನಾವು ಆಗಾಗ ನೋಡುತ್ತೇವೆ.

ತಂದೆಯು ತನ್ನ ಮಗನಿಗೆ ಗೊತ್ತಾಗದಂತೆ– ಅವನಿಗೆ ಗೊತ್ತಾಗಬಾರದೆಂಬ ಉದ್ದೇಶದಿಂದಲೇ-ಮುಚ್ಚು ಮರೆಯಿಂದ ವಿನಾದರೂ ತಿನ್ನುವದೂ ನಮ್ಮೆಲ್ಲರದೂ ಎಂದು ಹೇಳಲಾಗುವ ಆಶ್ರಮದ ಉಗ್ರಾಣದಲ್ಲಿಯ ಒಂದೇ ಒಂದು ಸಣ್ಣ ಬೆಲ್ಲದ ಕರಣೆಯನ್ನೂ ಮುಚ್ಚುಮರೆಯಾಗಿ ತೆಗೆದುಕೊಳ್ಳುವದೂ ಕಳ್ಳತನವೇ. ಎದುರಿಗಿದ್ದ ಜನರು ಬೇಕಾದ ಹಾಗೆ ನೋಡುತ್ತಿದ್ದರೂ ಯಾವುದೇ ಒಂದು ವಸ್ತುವನ್ನು ಆ ವಸ್ತುವಿನ ಯಜಮಾನನ ಅಪ್ಪಣೆಯ ಹೊರತು ತೆಗೆದುಕೊಳ್ಳುವದೂ ಕಳವು. ಒಡವೆಯು ಯಾರದೂ ಅಲ್ಲವೆಂದು ತಿಳಿದು, ಅದನ್ನು ತೆಗೆದುಕೊಳ್ಳುವದೂ ಕಳ್ಳತನವೆನಿಸುವದು. ಹಾದಿಯ ಮೇಲೆ ಸಿಕ್ಕ ಒಡವೆಯ ಯಜಮಾನರು ನಾವಲ್ಲ. ಆ ಪ್ರದೇಶದ ಅರಸನದಾಗಲಿ, ಆಧಿಪತ್ಯದ್ದಾಗಲಿ ಅದರ ಮೇಲೆ ಒಡೆತನದ ಅಧಿಕಾರ. ಆಶ್ರಮದ ಹತ್ತರ ಸಿಕ್ಕ ಯಾವುದೇ ಒಡವೆಯನ್ನು ಆಶ್ರಮದ ವ್ಯವಸ್ಥಾಪಕರಿಗೆ ಮುಟ್ಟಿಸಬೇಕು. ಅದು ಆಶ್ರಮದ್ದಾಗದಿದ್ದರೆ ಅಲ್ಲಿಯ ವ್ಯವಸ್ಥಾಪಕರು ಪೋಲೀಸರ ಸ್ವಾಧೀನ ಮಾಡಬೇಕು.

ಇಲ್ಲಿಯ ವರೆಗೆ ತಿಳಿದುಕೊಳ್ಳುವುದು **ಪ್ರಮಾಣದಿಂದ** ಸುಲಭವೇ ಇದೆ. ಆದರೆ ಅಸ್ತೇಯ ವ್ರತವು ಇದಕ್ಕಿಂತಲೂ ಬಹಳ ಮುಂದೆ ಹೋಗುತ್ತದೆ. ನಮಗೆ ಆವಶ್ಯಕವಿಲ್ಲದ ಒಡವೆಗಳನ್ನು ಆ ಒಡವೆಯ ಯಜಮಾನನನ್ನು ಕೇಳಿ ತೆಗೆದುಕೊಂಡರೂ ಅದು ಕಳ್ಳತನವಾಗುವದು. ನಮಗೆ ಬೇಡವಾದ ಒಂದು ವಸ್ತುವನ್ನು ತೆಗೆದುಕೊಳ್ಳಬಾರದು. ಜಗತ್ತಿ

ನಲ್ಲಿ ಇಂತಹ ಕಳವುಗಳು ಹೆಚ್ಚಾಗಿ ಆಗುತ್ತಿರುವುದು ತಿನ್ನುವ ಪದಾರ್ಥಗಳ ವಿಷಯುದಲ್ಲಿ. ನಮಗೆ ಯಾವುದಾದರೂ ಒಂದು ಹಣ್ಣಿನ ಅವಶ್ಯಕತೆಯಿಲ್ಲವೆಂದು ಕಲ್ಪಿಸುವಾ. ಆದರೂ ಅದನ್ನು ತೆಗೆದುಕೊಳ್ಳುವದೆಂದರೆ ಅದು ಕಳ್ಳತನವೆನಿಸುವುದು. ಯಾವುದಾದರೊಂದು ಪದಾರ್ಥವು ನನಗೆಷ್ಟು ಬೇಕಾಗುತ್ತದೆಂಬುದು ಮನುಷ್ಯನಿಗೆ ಯಾವಾಗಲೂ ಗೊತ್ತಾಗುವದಿಲ್ಲ. ಬಹುತರವಾಗಿ ನಾವೆಲ್ಲರೂ ನಮಗೆ ಬೇಕಾದುದಕ್ಕಿಂತ ಹೆಚ್ಚು ನಮ್ಮ ಆವಶ್ಯಕತೆಗಳನ್ನು ಬೆಳೆಯಿಸಿಡುತ್ತೇವೆ. ಆದುದರಿಂದ ನಾವು ನಮಗೆ ಗೊತ್ತಾಗದೆ ತುಡುಗರಾಗಿ ಬಿಡುತ್ತೇವೆ. ವಿಚಾರ ಮಾಡಲು ನಮ್ಮ ಅನೇಕ ಆವಶ್ಯಕತೆಗಳನ್ನು ನಾವು ಕಡಿಮೆ ಮಾಡಿಕೊಳ್ಳಬಹುದೆಂದು ನಮಗೆ ಕಂಡುಬರುವುದು. ಅಸ್ತೇಯ ವ್ರತವನ್ನು ಪಾಲಿಸುವವನು ದಿನೆ ದಿನೆ ತನ್ನ ಆವಶ್ಯಕತೆಗಳನ್ನು ಕಡಿಮೆ ಮಾಡುವನು. ಈ ಜಗತ್ತಿನಲ್ಲಿ ಕಂಗಾಲಸ್ಥಿತಿಯು ಅಸ್ತೇಯ ವ್ರತದ ಭಂಗದಿಂದಲೇ ಹೆಚ್ಚಾಗಿ ಉಂಟಾಗುತ್ತಿರುವುದು.

ಮೇಲೆ ತೋರಿಸಿದ್ದೆಲ್ಲವೂ ಬಹಿರಂಗ ಅಥವಾ ಶಾರೀರಿಕ ಕಳವೆಂದು ಹೇಳಬಹುದು. ಇದಕ್ಕಿಂತಲೂ ಸೂಕ್ಷ್ಮವಾದ ಆತ್ಮವನ್ನು ಅಧೋಗತಿಗೆ ಒಯ್ಯುವದು ಅಥವಾ ಅದರಲ್ಲಿಯೇ ಇಡುವುದೆಂದರೆ ಮಾನಸಿಕವಾದ ಕಳವು. ಮನಸ್ಸಿನಿಂದ ಯಾರದಾದರೂ ವಸ್ತುವನ್ನು ದೊರಕಿಸುವ ಇಚ್ಛೆಯನ್ನು ಮಾಡುವದೂ ಅಥವಾ ಅದರ ಮೇಲೆ ಕೆಟ್ಟ ದೃಷ್ಟಿಯನ್ನಿಡುವದೂ ಕಳ್ಳತನವು. ಸಣ್ಣವರೇ ಆಗಲಿ ದೊಡ್ಡವರೇ ಆಗಲಿ ಒಳ್ಳೆಯ ಒಡವೆಯನ್ನು ನೋಡಿ ಮನಸೋಲುವುದು ಸಹಜ. ಅದು ಮಾನಸಿಕ ಕಳವು. ಉಪವಾಸಿಯು ಶರೀರದಿಂದ ಊಟಮಾಡುವದಿಲ್ಲ. ಆದರೆ ಎರಡನೆಯವರು ಊಟ ಮಾಡುವದನ್ನು ನೋಡಿ ಮನಸ್ಸಿನಿಂದ ಸ್ವಾದವನ್ನು ತೆಗೆದುಕೊಂಡಲ್ಲಿ, ಅವನು ಕಳ್ಳನೆನಿಸಿಕೊಳ್ಳುವನು. ಇದರಿಂದ ಆತನ ಉಪವಾಸವ್ರತದ ಭಂಗವೂ ಆಗುವುದು. ಉಪವಾಸಿಯು ತನ್ನ ಉಪವಾಸವನ್ನು ಮುರಿಯುವಾಗ, ತಿನ್ನುವ ಪದಾರ್ಥಗಳ ಎಣಿಕೆಯನ್ನೇ ಹಾಕುತ್ತಿದ್ದರೆ ಅವನ ಅಸ್ತೇಯ ವ್ರತದ ಹಾಗೂ ಉಪವಾಸದ ಭಂಗವಾಗುವುದೆಂದೇ ಹೇಳಬಹುದು. ಅಸ್ತೇಯ ವ್ರತವನ್ನು ಪಾಲಿಸುವವನು ಮುಂದೆ ದೊರೆಯಬಹುದಾದ ವಸ್ತುವಿನ ಮೋಹದ ತಿರುಗಣಿಯಲ್ಲಿ ಬೀಳಬಾರದು. ಅನೇಕ ಕಳವುಗಳಲ್ಲಿ ಈ ಹೊಲಸು ಬಯಕೆಯು ಅಡಗಿ

ಕೊಂಡುದು ಕಂಡುಬರುವುದು. ಈ ಹೊತ್ತು ವಿಚಾರದಲ್ಲಿಯೇ ಇದ್ದದ್ದನ್ನು ನಾಳೆಯ ದಿವಸ-ಒಳ್ಳೆಯದಿರಲಿ ಕೆಟ್ಟದಿರಲಿ-ವಿವಿಧ ಉಪಾಯಗಳಿಂದಲೂ ಅದನ್ನು ದೊರಕಿಸಲಿಕ್ಕೆ ಪ್ರಯತ್ನ ಮಾಡತೊಡಗುವೆವು. ಒಡವೆಗಳ ಕಳವಾದಂತೆಯೇ ವಿಚಾರಗಳ ಕಳವೂ ಆಗುತ್ತಿರುವುದುಂಟು. ಯಾವುದಾದರೊಂದು ಉತ್ತಮ ವಿಚಾರವು ತನ್ನಲ್ಲಿ ಹುಟ್ಟಿರದಿದ್ದರೂ ಅದು ತನ್ನಲ್ಲಿಯೇ ಮೊದಲು ಹುಟ್ಟಿತೆಂದು ಅಹಂಕಾರದಿಂದ ಹೇಳುವವನು ವಿಚಾರಗಳ ಕಳ್ಳನೆನಿಸುತ್ತಾನೆ. ಜಗತ್ತಿನ ಇತಿಹಾಸದಲ್ಲಿ ಅನೇಕ ಜನ ವಿದ್ವಾಂಸರು ಇಂತಹ ಕಳವುಗಳನ್ನು ಮಾಡಿದ್ದಾರೆ. ಇಂದಿನ ವರೆಗೂ ಮಾಡುತ್ತಿರುತ್ತಾರೆ. ನಾನು ಆಂಧ್ರದಲ್ಲಿ ಹೊಸ ಮಾದರಿಯ ರಾಟಿಯನ್ನು ನೋಡಿದೆನೆಂದು ತಿಳಿಯಿರಿ. ಅಂತಹ ರಾಟಿಯನ್ನು ನಾನು ಆಶ್ರಮದಲ್ಲಿ ಸಿದ್ಧ ಮಾಡಿಸಿದ ಮೇಲೆ ಅದು ನನ್ನ ಶೋಧವೆಂದು ಹೇಳಲು ತೊಡಗಿದರೆ ನಾನು ಸ್ಪಷ್ಟ ರೀತಿಯಿಂದ ಎರಡನೆಯವರು ಮಾಡಿದ ಶೋಧದ ಕಳವು ಮಾಡಿದಂತಾಗುವುದು. ಇಷ್ಟೇಅಲ್ಲ, ಅಸತ್ಯವನ್ನೂ ಉಪಯೋಗ ಮಾಡಿದಂತಾಗುವುದು.

ಅಸ್ತೇಯ ವ್ರತವನ್ನು ಪಾಲಿಸುವವನು ನಮ್ರನಾಗಿಯೂ ವಿಚಾರ ಶೀಲನಾಗಿಯೂ ಜಾಗರೂಕನಾಗಿಯೂ ಸರಳವೃತ್ತಿಯುಳ್ಳವನಾಗಿಯೂ ಇರಬೇಕಾಗುವುದು.

---

## ೬ ಅಪರಿಗ್ರಹ

ತಾ॥ ೨೫ - ೮ - ೩೦

ಮಂಗಲ ಪ್ರಭಾತ

ಅಪರಿಗ್ರಹವನ್ನು ಅಸ್ತೇಯಕ್ಕೆ ಸಮೀಪವಾಗಿಯೆ ಎಣಿಸಬಹುದು. ಕಳ್ಳತನದ ಸಂಪಾದನೆಯಲ್ಲವಾದರೂ ತನಗೆ ಅನಾವಶ್ಯಕವಾದ ಒಡವೆಗಳ ಸಂಗ್ರಹವನ್ನು ಮಾಡುವದರಿಂದ ಆ ಒಡವೆಗಳೂ ಕಳ್ಳತನದಿಂದ ಸಂಪಾದಿಸಿದ ಒಡವೆಯಲ್ಲಿಯೇ ಸಮಾವೇಶವಾಗುತ್ತವೆ. ಪರಿಗ್ರಹವೆಂದರೆ ಸಂಗ್ರಹ ಮಾಡುವದು ಅಥವಾ ಒಟ್ಟುಗೂಡಿಸುವದು. ಸತ್ಯಶೋಧಕನೂ ಅಹಿಂಸಾವ್ರತಿಯೂ ಆದವನು ಪರಿಗ್ರಹವನ್ನೇ ಮಾಡಲಾರನು. ಪರ

ಮಾತ್ಮನು ಪರಿಗ್ರಹವನ್ನು ಮಾಡುವುದಿಲ್ಲ. ಅವನಿಗೆ 'ಬೇಕಾದ' ವಸ್ತುಗಳನ್ನು ಅವನು ದಿನಾಲು ಹುಟ್ಟಿಸುತ್ತಾನೆ. ಅಂದರೆ ನಾವು ಅವನ ಮೇಲೆ ವಿಶ್ವಾಸವನ್ನಿಟ್ಟರೆ ನಮಗೆ ಬೇಕಾದ ವಸ್ತುಗಳನ್ನು ಅವನು ದಿನಾಲು ಕೊಡುತ್ತಾನೆ; ಮುಂದೆಯೂ ಕೊಡುವನು—ಎಂದು ನಮಗೆ ಗೊತ್ತಾಗುತ್ತದೆ. ಎಲ್ಲ ಧರ್ಮಗಳಲ್ಲಿಯ ಭಕ್ತರಿಗೂ ಸಂತರಿಗೂ ಇದರ ಅನುಭವವು ಇರುತ್ತದೆ. ದಿನದಿನವೂ ಬೇಕಾಗುವಷ್ಟೇ ದಿನದಿನವೂ ಹುಟ್ಟಿಸುವ ಈಶ್ವರೀ ನಿಯಮವನ್ನು ನಾವು ಅರಿತುಕೊಂಡಿಲ್ಲ; ಅರಿತಿದ್ದರೂ ಅದರಂತೆ ನಡೆಯುವದಿಲ್ಲ. ಆದುದರಿಂದಲೇ ಜಗತ್ತಿನಲ್ಲಿ ನಾವು ವಿಷಮತೆಯನ್ನೂ ಅದರಿಂದೊದಗುವ ದುಃಖಗಳನ್ನೂ ಅನುಭವಿಸುತ್ತೇವೆ. ಶ್ರೀಮಂತರಲ್ಲಿ ಅವರಿಗೆ ಬೇಡಾದ ಒಡವೆಗಳು ತುಂಬಿರುತ್ತವೆ. ಅತ್ತಿತ್ತ ಬಿದ್ದು ಕೆಟ್ಟು ಹೋಗುತ್ತವೆ. ಆದರೆ ಅವುಗಳ ಅಭಾವದಿಂದ ಕೋಟ್ಯವಧಿ ಜನರು ಹೊಟ್ಟೆಗಿಲ್ಲದೆ ಸಾಯುತ್ತಾರೆ. ತೊಳಲಿ ಬಳಲುತ್ತಾರೆ. ಚಳಿಯಿಂದ ನಡುಗುತ್ತಾರೆ. ಎಲ್ಲರೂ ತಮಗೆ ಬೇಕಾದ ಒಡವೆಗಳನ್ನಷ್ಟೇ ಸಂಗ್ರಹ ಮಾಡಿದರೆ ಯಾರಿಗೂ ಕೊರತೆ ಬೀಳುವದಿಲ್ಲ. ಎಲ್ಲರೂ ಸುಖಿಗಳಾಗುವರು. ಈ ಕಾಲದಲ್ಲಿ ಬಲ್ಲಿದ, ಬಡವರಿಬ್ಬರೂ ಕೊರತೆಯಲ್ಲಿದ್ದಾರೆ. ಕೋಟ್ಯಧೀಶನು ಅಬ್ಜಾಧೀಶನಾಗಲಿಕ್ಕೆ ಪ್ರಯತ್ನಪಡುತ್ತಾನೆ. ಆದುದರಿಂದ ಅವನಿಗೆ ಸಮಾಧಾನವಿಲ್ಲ. ಕಂಗಾಲನು ಕೋಟ್ಯಧೀಶನಾಗಲಿಕ್ಕೆ ಇಚ್ಛಿಸುತ್ತಾನೆ. ಕಂಗಾಲನಿಗೆ ಹೊಟ್ಟೆಯ ಮಟ್ಟಿಗೆ ಮಾತ್ರ ಸಿಕ್ಕರೆ ಸಂತೋಷವಾಗುವಂತೆ ತೋರುವುದಿಲ್ಲ. ಕಂಗಾಲನಿಗೆ ಹೊಟ್ಟೆಯ ಮಟ್ಟಿಗೆ ದೊರಕಿಸುವ ಅಧಿಕಾರವಿದೆ. ಅವನಿಗೆ ಅಷ್ಟು ಗಳಿಸುವಂತೆ ಮಾಡುವುದು ಸಮಾಜದ ಧರ್ಮವಾಗಿದೆ. ಆದ್ದರಿಂದ **ಕಂಗಾಲನ ಹಾಗು ತನ್ನ ಹಿತಕ್ಕಾಗಿ** ಶ್ರೀಮಂತರು ಮೊದಲು ಈ ಉಪಕ್ರಮವನ್ನು ಮಾಡಬೇಕು. ಅವರು ಹೆಚ್ಚಾಗಿ ಪರಿಗ್ರಹ ಮಾಡುವದನ್ನು ಬಿಟ್ಟರೆ, ಕಂಗಾಲನಿಗೆ ಹೊಟ್ಟೆಯ ಮಟ್ಟಿಗೆ ಸುಲಭವಾಗಿ ದೊರಕುವುದು. ಮತ್ತು ಎರಡೂ ಪಕ್ಷದವರು ಸಂತೋಷದ ಪಾಠವನ್ನು ಕಲಿಯುವರು. ಆತ್ಯಂತಿಕ ಅಪರಿಗ್ರಹದ ಆದರ್ಶಸ್ಥಿತಿಯೆಂದರೆ ಮನಸ್ಸಿನಿಂದಲೂ ಕರ್ಮದಿಂದಲೂ ದಿಗಂಬರನಾಗಿರುವುದು. ಇಂತಹ ದಿಗಂಬರನು ಪಕ್ಷಿಗಳಂತೆ ಮನೆಯಿಲ್ಲದೆ ವಸ್ತ್ರವಿಲ್ಲದೆ, ಅನ್ನಸಂಗ್ರಹವಿಲ್ಲದೆ ತಿರುಗಾಡುವನು. ಅವನಿಗೆ ದಿನಾಲು ಬೇಕಾಗುವ ಅನ್ನವನ್ನು ದೇವರು ಕೊಟ್ಟೇ ಕೊಡುತ್ತಾನೆ. ಈ ಅವಧೂತ

ಸ್ಥಿತಿಗೆ ಬಂದು ನಿಲ್ಲುವವರು ಎಲ್ಲಿಯೋ ಒಬ್ಬಿಬ್ಬರು. ನಾವು ಸಾಮಾನ್ಯ ಕೋಟಿಯಲ್ಲಿಯ ಸತ್ಯಾಗ್ರಹಿಗಳು-ಜಿಜ್ಞಾಸುಗಳು ಆದರ್ಶವನ್ನು ಲಕ್ಷ್ಯದಲ್ಲಿಟ್ಟುಕೊಂಡು, ಕೈಯಲ್ಲಾದ ಮಟ್ಟಿಗೆ ನಮ್ಮ ಪರಿಗ್ರಹವನ್ನು ಪರೀಕ್ಷಿಸಿ, ಕಡಿಮೆ ಮಾಡುತ್ತಾ ಹೋಗುವಾ. ನಿಜವಾದ ಸುಧಾರಣೆಯು ಮತ್ತು ನಿಜವಾದ ಸತ್ಯದ ಲಕ್ಷಣವು ಪರಿಗ್ರಹವನ್ನು ಬೆಳೆಸುವದಲ್ಲ: ಅದನ್ನು ವಿಚಾರಪೂರ್ವಕವಾಗಿ ಕಡಿಮೆ ಮಾಡುವುದು. ನಾವು ಪರಿಗ್ರಹ ವನ್ನು ಕಡಿಮೆ ಮಾಡುತ್ತ ಹೋದ ಹಾಗೆ ನಿಜವಾದ ಸುಖವೂ, ಸಂತೋಷವೂ ಹೆಚ್ಚುತ್ತದೆ. ಸೇವಾಶಕ್ತಿಯು ಬೆಳೆಯುತ್ತದೆ. ಹೀಗೆ ಮಾಡುವುದರಿಂದಲೂ ಇದರಂತೆ ವರ್ತಿಸುವುದರಿಂದಲೂ ನಾವು ಆಶ್ರಮ ದಲ್ಲಿ ಆವಶ್ಯಕತೆಯಿದೆಯೆಂದು ಸಿದ್ಧಮಾಡಲಿಕ್ಕೆ ಬಾರದ ಅನೇಕ ಒಡವೆ ಗಳನ್ನು ಸಂಗ್ರಹ ಮಾಡಿದುದು ಕಂಡುಬರುವುದು. ಅಲ್ಲದೆ ಇಂತಹ ಅನಾವಶ್ಯಕವಾದ ಪರಿಗ್ರಹದಿಂದ ನೆರೆಯುವರನ್ನು ಕಳವುಮಾಡುವ ಆಶೆ ಯಲ್ಲಿ ಕೆಡಿಹಿದಂತಾಗುವುದು. ಮನುಷ್ಯನಿಗೆ ಅಭ್ಯಾಸದಿಂದ ಸ್ವಂತದ ಕೊರತೆಗಳನ್ನು ಕಡಿಮೆ ಮಾಡಿಕೊಳ್ಳಲಿಕ್ಕೆ ಬರುತ್ತದೆ. ಮತ್ತು ಕಡಿಮೆ ಮಾಡುತ್ತ ಹೋದ ಹಾಗೆ ಅವನು ಸುಖ ಶಾಂತಿಗಳುಳ್ಳವನೂ ಎಲ್ಲ ರೀತಿ ಯಿಂದ ಆರೋಗ್ಯವುಳ್ಳವನೂ ಆಗುತ್ತಾನೆ. ಕೇವಲ ಸತ್ಯದ ಮತ್ತು ಆತ್ಮದ ದೃಷ್ಟಿಯಿಂದ ವಿಚಾರ ಮಾಡಲು ಶರೀರವೂ ಪರಿಗ್ರಹವು. ಭೋಗೇಚ್ಛೆಯಿಂದ ನಾವು ಶರೀರದ ಹೊದಿಕೆಯನ್ನು ನಿರ್ಮಿಸಿದ್ದೇವೆ. ಅದಕ್ಕಾಗಿಯೇ ಅದನ್ನು ಬಾಳಿಸುತ್ತೇವೆ. ಭೋಗೇಚ್ಛೆಯು ನಾಶ ವಾಯಿತೆಂದರೆ ಶರೀರದ ಆವಶ್ಯಕತೆಯೂ ನಾಶವಾಗುತ್ತದೆ. ಅಂದರೆ ಮನುಷ್ಯನಿಗೆ ಹೊಸ ಶರೀರವನ್ನು ಧಾರಣ ಮಾಡುವುದು ಸಹ ಉಳಿ ಯುವುದಿಲ್ಲ. ಆತ್ಮವು ಸರ್ವವ್ಯಾಪಿಯಾಯಿತೆಂದರೆ ಶರೀರ ರೂಪಿಯಾದ ಸಣ್ಣ ಪಂಜರದಲ್ಲಿ ಹೇಗೆ ಹಿಡಿಸೀತು? ಈ ಪಂಜರದ ಸಂರಕ್ಷಣೆಗಾಗಿ ಅನರ್ಥಗಳನ್ನು ಏತಕ್ಕೆ ಮಾಡಿಯಾನು? ಎರಡನೆಯವರನ್ನು ಏತಕ್ಕೆ ಕೊಂದಾನು? ಎಂಬುದಾಗಿ ವಿಚಾರ ಮಾಡುತ್ತ ನಾವು ಆತ್ಯಂತಿಕ ತ್ಯಾಗಕ್ಕೆ ಹೋಗಿ ಮುಟ್ಟುತ್ತೇವೆ. ಶರೀರವು ಇರುವ ವರೆಗೆ ಅದರ ಉಪಯೋಗವನ್ನು ಕೇವಲ ಸೇವೆಯಲ್ಲಿ ಸವೆಯಿಸಲಿಕ್ಕೆ ಕಲಿಯುತ್ತೇವೆ. ಇದರಿಂದ ಶರೀರದ ನಿಜವಾದ ಆಹಾರವೇ ಸೇವೆಯನ್ನು ಮಾಡುವುದಾಗಿ ಬಿಡುವದು. ಅದು ತಿನ್ನುವುದು, ಉಣ್ಣುವುದು, ಮಲಗುವುದು, ಕೂಡು

ವುದು, ಏಳುವುದು, ನಿದ್ರೆ ಮಾಡುವುದು ಎಲ್ಲವೂ ಸೇವೆಗೋಸ್ಕರವೇ ಎನಿಸಿಬಿಡುವುದು. ಇದರಿಂದ ಉತ್ಪನ್ನವಾಗುವ ಸುಖವು ನಿಜವಾದ ಸುಖವು. ಹೀಗೆ ಮಾಡುತ್ತ ಮನುಷ್ಯನು ಕೊನೆಗೆ ಸತ್ಯದ ದರ್ಶನವನ್ನು ಕೊಂಚ ಮಾಡಿಕೊಳ್ಳುವನು. ಈ ದೃಷ್ಟಿಯಿಂದ ನಾವೆಲ್ಲರೂ ನಮ್ಮ ಪರಿಗ್ರಹವನ್ನು ವಿಚಾರ ಮಾಡಿಕೊಳ್ಳಬೇಕು.

ಇನ್ನು ಮುಂದೆ ಹೇಳಬೇಕಾದುದು ಲಕ್ಷ್ಯದಲ್ಲಿಡಲು ಯೋಗ್ಯವಿದೆ:- ವಸ್ತುಗಳ ಅಪರಿಗ್ರಹವನ್ನು ಮಾಡಿದಂತೆಯೇ ವಿಚಾರಗಳ ಅಪರಿಗ್ರಹವನ್ನೂ ಮಾಡತಕ್ಕದ್ದು. ತನ್ನ ತಲೆಯಲ್ಲಿ ನಿರರ್ಥಕವಾದ ಜ್ಞಾನವನ್ನು ತುಂಬಿಕೊಂಡವನು ಪರಿಗ್ರಹಿ ಎನಿಸಿಕೊಳ್ಳುತ್ತಾನೆ. ಯಾವ ವಿಚಾರಗಳು ನಮ್ಮನ್ನು ಈಶ್ವರನಿಂದ ದೂರ ಮಾಡುತ್ತವೆಯೋ ಅಥವಾ ಈಶ್ವರನ ಕಡೆಗೆ ತೆಗೆದುಕೊಂಡು ಹೋಗಲಾರವೋ ಅವೆಲ್ಲವೂ ಪರಿಗ್ರಹದಲ್ಲಿ ಬರುತ್ತವೆ. ಆದುದರಿಂದ ಅವು ತ್ಯಾಜ್ಯವಿರುತ್ತವೆ. ಭಗವಾನ್ ಶ್ರೀಕೃಷ್ಣನು ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ಜ್ಞಾನಸಂಬಂಧಿಯಾಗಿ ಇದೇ ಪ್ರಕಾರದ ವ್ಯಾಖ್ಯೆಯನ್ನು ಹೇಳಿದ್ದಾನೆ. ಇಲ್ಲಿ ಅದನ್ನು ವಿಚಾರ ಮಾಡತಕ್ಕದ್ದಾಗಿದೆ. ಅಮಾನಿತ್ವ ಮುಂತಾದವುಗಳನ್ನು ಎಣಿಸಿ ಹೇಳಿ, ಅವುಗಳ ಹೊರಗಿನದೆಲ್ಲವೂ ಅಜ್ಞಾನವೆಂದು ಹೇಳಿದ್ದಾನೆ. ಇದು ಸತ್ಯವಚನವಿದ್ದರೆ- ಸತ್ಯವು ಇದ್ದೇ ಇರುತ್ತದೆ- ನಾವು ಜ್ಞಾನದ ಹೆಸರಿನ ಮೇಲೆ ಅನೇಕ ವಿಷಯಗಳನ್ನು ಸಂಗ್ರಹಿಸುವದೆಲ್ಲವೂ ಅಜ್ಞಾನವಾಗಿರುವುದರಿಂದ ಲಾಭಕ್ಕೆ ಬದಲು ಹಾನಿಯೇ ಆಗುತ್ತದೆ. ಅದರಿಂದ ತಲೆಯು ಭ್ರಮಿಷ್ಠವಾಗುತ್ತದೆ. ಕೊನೆಗೆ ಬರಿದಾಗುತ್ತದೆ. ಅಸಂತೋಷವು ಹಬ್ಬುತ್ತದೆ. ಅನರ್ಥಗಳು ಹೆಚ್ಚುತ್ತವೆ. ಪ್ರತಿಯೊಂದು ಕ್ಷಣವೂ ಪ್ರವೃತ್ತಿಮಯವಾಗಿರಲಿಕ್ಕೆ ಬೇಕು. ಆದರೆ ಆ ಪ್ರವೃತ್ತಿಯು ಸಾತ್ವಿಕವಾದುದಾಗಿಯೂ ಸತ್ಯದ ಕಡೆಗೆ ಒಯ್ಯುವಂತಹದಾಗಿಯೂ ಇರಲಿಕ್ಕೆ ಬೇಕು. ಸೇವಾಧರ್ಮವನ್ನು ಸ್ವೀಕರಿಸುವವನು ಒಂದು ಕ್ಷಣವಾದರೂ ಮಂದವಾಗಿರಬಾರದು. ನಾವು ಸಾರಾಸಾರ ವಿಚಾರವನ್ನು ಕಲಿಯುವದಿರುತ್ತದೆ. ಸೇವಾಪರಾಯಣನಾದವನಿಗೆ ಈ ವಿವೇಕವು ಸುಲಭ ರೀತಿಯಿಂದ ಪ್ರಾಪ್ತವಾಗುತ್ತದೆ.

---

# ೭ ಅಭಯ

ತಾ. ೨೦-೯-೩೦
ಮಂಗಲ ಪ್ರಭಾತ

ಹದಿನಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ದೈವೀಸಂಪತ್ತಿನ ವರ್ಣನೆಯನ್ನು ಮಾಡುವಾಗ, ಅಭಯಕ್ಕೆ ಮೊದಲನೆಯ ಸ್ಥಾನವನ್ನು ಕೊಟ್ಟಿದ್ದಾನೆ. ಶ್ಲೋಕವನ್ನು ಕೂಡಿಸುವುದರ ಸಲುವಾಗಿಯೇ ಇದು ಇರಲಿ, ಅಭಯವೇ ಶ್ರೇಷ್ಠವೆಂಬುದನ್ನು ತೋರಿಸುವ ಉದ್ದೇಶದಿಂದಲೇ ಇರಲಿ, ನಾನಂತೂ ಈ ವಾದದಲ್ಲಿ ಬೀಳುವದಿಲ್ಲ. ಇದರ ವಿಷಯದಲ್ಲಿ ನಿರ್ಣಯ ಮಾಡುವ ಯೋಗ್ಯತೆಯೂ ನನ್ನಲ್ಲಿಲ್ಲ. ಅಭಯಕ್ಕೆ ಅನಾಯಾಸವಾಗಿ ಅಗ್ರಸ್ಥಾನ ಸಿಕ್ಕಿದ್ದರೆ ನನ್ನ ಮತಿಯಂತೆ ಅದಕ್ಕೆ ಅದು ಯೋಗ್ಯ ಸ್ಥಾನವೇ ಆಗಿದೆ. ಅಭಯವಿಲ್ಲದಿದ್ದರೆ ಉಳಿದ ಸಂಪತ್ತಿಗಳು ಪ್ರಾಪ್ತವಾಗುವುದಿಲ್ಲ. ಅಭಯದ ಹೊರತು ಸತ್ಯದ ಶೋಧವು ಹೇಗಾದೀತು ? ಅಭಯದ ಹೊರತು ಅಹಿಂಸೆಯ ರಕ್ಷಣೆಯು ಹೇಗಾದೀತು ? 'ಹರಿಯ ಮಾರ್ಗವು ಶೂರರದು, ಹೇಡಿಗಳದಲ್ಲ.' ಸತ್ಯವೇ ರಾಮನು. ಸತ್ಯವೇ ನಾರಾಯಣನು. ಸತ್ಯವೇ ವಾಸುದೇವನು. ಪುಕ್ಕನೆಂದರೆ ಹೆದರುಬಡುಕನಾದ ಹೇಡಿ. ಶೂರನೆಂದರೆ ಶಸ್ತ್ರಾಸ್ತ್ರಗಳನ್ನು ಹಿಡಿದವನಲ್ಲ. ಭಯಮುಕ್ತನು; ಶಸ್ತ್ರಾಸ್ತ್ರಗಳು ಶೂರರ ಚಿನ್ಹಗಳಲ್ಲ, ಹೇಡಿಯ ಚಿನ್ಹಗಳು.

ಹೊರಗಿನ ಎಲ್ಲ ಅಂಜಿಕೆಗಳಿಂದ ಬಿಡುಗಡೆ ಹೊಂದುವುದೇ ಅಭಯವು. ಸಾವಿನ ಅಂಜಿಕೆ, ದುಡ್ಡು ದುಗ್ಗಾಣಿಯನ್ನು ಕದ್ದೊಯ್ಯುವ ಅಂಜಿಕೆ, ಮನೆಮಾರಿನ ಅಂಜಿಕೆ, ರೋಗಗಳ ಅಂಜಿಕೆ, ಶಸ್ತ್ರಗಳ ಪ್ರಹಾರದ ಅಂಜಿಕೆ, ಮಾನದ ಅಂಜಿಕೆ, ಯಾರಾದರೂ ಮನನೋಯಿಸುವ ಅಂಜಿಕೆ ಹೀಗೆ ಅಂಜಿಕೆಯ ವಂಶಾವಳಿಯನ್ನು ಬೆಳೆಯಿಸಿದಷ್ಟು ಬೆಳೆಯಬಲ್ಲದು. ಸಾವಿನ ಭಯವೊಂದನ್ನು ಗೆದ್ದರೆ ಉಳಿದ ಎಲ್ಲ ಭಯಗಳನ್ನು ಗೆದ್ದಂತೆಯೇ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ ಇದು ಸರಿಯಾದ ಮಾತಲ್ಲ. ಎಷ್ಟೋ ಜನರು ಸಾವಿನ ಅಂಜಿಕೆಯನ್ನು ತೊರೆದರೂ ನಾನಾ ಪ್ರಕಾರದ ದುಃಖಗಳಿಗೆ ಹೆದರಿ ಹಿಂಜರಿಯುತ್ತಾರೆ. ಕೆಲವರು

ಸಾಯಲಿಕ್ಕೆ ಸಿದ್ಧರಿದ್ದರೂ ಆಪ್ತೇಷ್ಟರ ವಿಯೋಗವು ಸಹನವಾಗುವುದಿಲ್ಲ. ಕೃಪಣನು ಇದೆಲ್ಲವನ್ನೂ ಬಿಡಬಹುದು, ದೇಹವನ್ನೂ ಬಿಡಬಹುದು; ಆದರೆ ಕೂಡಹಾಕಿದ ಹಣವನ್ನು ಅಗಲುವಾಗ ಕಳವಳಗೊಳ್ಳುವನು. ಕೆಲವು ಜನರು ಸ್ವತಃ ಕಲ್ಪಿಸಿದ ಮಾನ ಮರ್ಯಾದೆಗಳನ್ನು ಕಾಯ್ದು ಕೊಳ್ಳುವದಕ್ಕೆ, ಅನೇಕ ಮೇಲು ಕೀಳು ಕಾರ್ಯಗಳನ್ನು ಮಾಡಲಿಕ್ಕೆ ಸಿದ್ಧರಾಗುವರಿಷ್ಟೇ ಅಲ್ಲ, ಮಾಡಿಯೂ ಬಿಡುವರು. ಮತ್ತೆ ಕೆಲವರು ಸತ್ಯ ಮಾರ್ಗವು ಗೊತ್ತಿದ್ದರೂ ಜನರ ನಿಂದೆಗಂಜಿ ಅದರಂತೆ ನಡೆಯಲಿಕ್ಕೆ ಹಿಂಜರಿಯುವರು. ಸತ್ಯಶೋಧಕನಿಗೆ ಅವೆಲ್ಲ ಭಯಗಳಿಗೆ ತಿಲಾಂಜಲಿ ಯನ್ನು ಕೊಟ್ಟಾಗಲೇ ಮುಕ್ತಿಯು. ಹರಿಶ್ಚಂದ್ರನಂತೆ ಸರ್ವಸ್ವವನ್ನು ಸಿದ್ಧಿಮಾಡಿಕೊಳ್ಳುವ ಮನಃಸಿದ್ಧತೆಯು ಅವನಲ್ಲಿರಬೇಕು. ಹರಿಶ್ಚಂದ್ರನ ಕಥೆಯು ಕಲ್ಪನೆಯಿಂದ ಕಟ್ಟಿದುದೇ ಆಗಿರಲಿ! ಆದರೆ ಆತ್ಮಾರ್ಥಿಗಳೆಲ್ಲ ರಿಗೂ ಸತ್ಯದ ಬಗ್ಗೆ ಇದೇ ಅನುಭವವಿದೆ. ಹರಿಶ್ಚಂದ್ರನ ಕಥೆಯ ಬೆಲೆಯು ಯಾವುದೇ ಐತಿಹಾಸಿಕ ಕಥೆಗಿಂತಲೂ ಎಷ್ಟೋ ಪಾಲು ಹೆಚ್ಚಾ ಗಿದೆ. ಮತ್ತು ನಮ್ಮೆಲ್ಲರಿಗೂ ಇದು ಸಂಗ್ರಹಣೀಯವೂ, ಮನ ನೀಯವೂ ಆದುದಾಗಿದೆ.

ಅಭಯ ವ್ರತದ ಪೂರ್ಣಪಾಲನವು ಬಹುತರವಾಗಿ ಅಶಕ್ಯವಿದೆ. ಎಲ್ಲ ಭಯಗಳಿಂದಲೂ ಮುಕ್ತನಾಗಿರುವುದು ಆತ್ಮಸಾಕ್ಷಾತ್ಕಾರವಾದ ವನಿಗೇ ಸಾಧ್ಯವಹುದು. ಅಭಯವು ಮೂರ್ಛಾರಹಿತ ಸ್ಥಿತಿಯ ಪರಾ ಕಾಷ್ಟವು. ನಿಶ್ಚಯದಿಂದಲೂ ಸತತವಾದ ಪ್ರಯತ್ನದಿಂದಲೂ ಆತ್ಮದ ಮೇಲಿನ ಶ್ರದ್ಧೆಯನ್ನು ಬೆಳೆಯಿಸುವದರಿಂದಲೂ ಅಭಯದ ಪ್ರಮಾಣವು ಬೆಳೆಯಬಲ್ಲುದು. ನಮಗೆ ಹೊರಗಿನ ಭಯಗಳಿಂದ ಮಾತ್ರ ಮುಕ್ತ ರಾಗುವುದಿರುತ್ತದೆಂದು ನಾನು ಆರಂಭದಲ್ಲಿಯೇ ಹೇಳಿದ್ದೇನೆ. ಒಳಗಿದ್ದ ಶತ್ರುಗಳಿಗಂತೂ ಅಂಜಿ ನಡೆಯಲೇಬೇಕಾಗುತ್ತದೆ. ಕಾಮ ಕ್ರೋಧಾದಿ ಗಳ ಭಯವು ನಿಜವಾದದ್ದು. ಇವುಗಳನ್ನು ಗೆದ್ದರೆ, ಹೊರಗಿನ ಭಯಗಳು ತನ್ನಷ್ಟಕ್ಕೆ ತಾನೇ ನಾಶವಾಗುವುವು. ದೇಹವಿರುವವರೆಗೆ ಭಯವು ಇದ್ದದ್ದೇ. ದೇಹದ ಮೇಲಿನ ಮೋಹವನ್ನು ಬಿಟ್ಟರೆ, ಅಭಯವು ಸುಲಭವಾಗಿ ಪ್ರಾಪ್ತವಾಗುವುದು. ವಿಚಾರ ಮಾಡಿ ನೋಡಲು ಎಲ್ಲ ಭಯಗಳೂ ನಮ್ಮ ಕಲ್ಪನಾಸೃಷ್ಟವೆಂದು ನಮಗೆ

ಗೊತ್ತಾಗುವುದು. ದುಡ್ಡು, ಸಂಸಾರ, ದೇಹ ಇವುಗಳಲ್ಲಿಂದ ನನ್ನದು ಎಂಬ ಭಾವನೆಯನ್ನು ಕಿತ್ತೊಗೆದರೆ ಭಯವೆಲ್ಲಿ? तेन त्यक्तेन भुंजीथा: ಇದೊಂದು ತಾರಕ ಮಂತ್ರದಂತಿದೆ? ಕುಟುಂಬ, ದುಡ್ಡು, ದೇಹ ಇವುಗಳೆಲ್ಲವೂ ಇದ್ದಕ್ಕಿದ್ದಂತೆಯೇ ಇರುವವು. ಇವುಗಳ ವಿಷಯಕ್ಕಿರುವ ನಮ್ಮ ಕಲ್ಪನೆಯನ್ನು ಬದಲಿಸಲಿಕ್ಕೆ ಬೇಕು. "ಇದು ನಮ್ಮದಲ್ಲ; ಇದು ನನ್ನದಲ್ಲ; ಇದು ಈಶ್ವರನದು ಇದೆ, ನಾನು ಸಹ ಆತನವನು ಇದ್ದೇನೆ; ನನ್ನದೆಂಬುದು ಈ ಜಗತ್ತಿನಲ್ಲಿ ಏನೂ ಇಲ್ಲ. ಎಂದ ಮೇಲೆ ಏತರ ಸಲುವಾಗಿ ನನಗೆ ಭಯವಿರಬೇಕು?" ಇತ್ಯಾದಿ ಭಾವನೆಗಳು ನಮ್ಮಲ್ಲಿ ನೆಲೆ ಮಾಡಬೇಕು; ಉಪನಿಷತ್ಕಾರರು 'ಅದರ ತ್ಯಾಗವನ್ನು ಮಾಡಿ ಅದನ್ನು ಭೋಗಿಸು ಎಂದು' ಹೇಳಿರುವರು. ಹೀಗೆ ಮಾಡಿದರೆ ನಾವು ಅದರ ಕಾವಲುಗಾರರಾಗುವೆವು. ಅವನು ಅದನ್ನು ರಕ್ಷಿಸುವಷ್ಟು ಸಾಮರ್ಥ್ಯವನ್ನೂ ಸಾಮುಗ್ರಿಗಳನ್ನೂ ನಮಗೆ ಕೊಡುವನು. ಹೀಗೆ ಒಡೆಯರು ಹೋಗಿ ಸೇವಕರಾದರೆ, ಶೂನ್ಯದಂತೆ ಆಗಿಬಿಟ್ಟರೆ, ಸುಲಭವಾಗಿ ಭಯಗಳೆಲ್ಲವನ್ನೂ ಗೆಲ್ಲುವೆವು. ಶಾಂತಿಯನ್ನು ಹೊಂದುವೆವು. ಸತ್ಯನಾರಾಯಣನ ದರ್ಶನವನ್ನು ಮಾಡಿಕೊಳ್ಳುವೆವು.

---

## ೮ ಅಸ್ಪೃಶ್ಯತಾ ನಿವಾರಣೆ

ತಾ. ೯-೯-೩೦

ಮಂಗಲ ಪ್ರಭಾತ

ಈ ವ್ರತವೂ ಅಸ್ವಾದ ವ್ರತದಂತೆ ಹೊಸದಿರುತ್ತದೆ. ಅನೇಕರಿಗೆ ಸ್ವಲ್ಪ ವಿಲಕ್ಷಣವಾಗಿಯೂ ತೋರುವಂತಿರುತ್ತದೆ. ಎಷ್ಟು ವಿಲಕ್ಷಣವಿದೆಯೋ ಅದಕ್ಕಿಂತಲೂ ಹೆಚ್ಚಾಗಿ ಅದರ ಅವಶ್ಯಕತೆಯಿದೆ. ಅಸ್ಪೃಶ್ಯತೆಯೆಂದರೆ ಮೈಲಿಗೆಯು. ಆಖಾ ಎಂಬ ಗುಜರಾತಿ ಕವಿಯು ಇದರ ವಿಷಯಕ್ಕೆ ಚೆನ್ನಾಗಿ ಹಾಡಿದ್ದಾನೆ. 'आभडछेट अदकेरू अंग' ಮೈಲಿಗೆಯು ಹೆಚ್ಚಿನ ಅಂಗವು.

ಇದು ಬೇರೆ ಬೇರೆ ಧರ್ಮಗಳಲ್ಲಿ ಧರ್ಮದ ಹೆಸರಿನಿಂದಾಗಲೀ, ಅದರ ನೆವದಿಂದಾಗಲೀ, ಅನೇಕ ತೊಂದರೆಗಳನ್ನು ಉಂಟುಮಾಡುತ್ತಿರುತ್ತದೆ. ಅಲ್ಲದೆ ಧರ್ಮವನ್ನು ಕಲುಷಿತವನ್ನಾಗಿ ಮಾಡುತ್ತದೆ. ಆತ್ಮವು ಒಂದೇ ಇದ್ದರೆ, ಈಶ್ವರನು ಒಬ್ಬನೇ ಇದ್ದರೆ, ಅಸ್ಪೃಶ್ಯರು ಯಾರೂ ಇಲ್ಲ. ಹೇಗೆ ಹೊಲೆಯರನ್ನೂ ಭಂಗಿಗಳನ್ನೂ ಅಸ್ಪೃಶ್ಯರೆಂದು ತಿಳಿದರೂ ಅಸ್ಪೃಶ್ಯರಿರುವದಿಲ್ಲವೋ ಹಾಗೆಯೆ ಮೃತದೇಹವೂ ಅಸ್ಪೃಶ್ಯವಿರುವುದಿಲ್ಲ. ಅದು ಮಾನಕ್ಕೂ ಕಾರುಣ್ಯಕ್ಕೂ ಪಾತ್ರವಿರುತ್ತದೆ. ಮೃತದೇಹವನ್ನು ಮುಟ್ಟಿಯೋ, ಎಣ್ಣೆಯನ್ನು ಹೂಸಿಕೊಂಡೋ, ಕ್ಷೌರವನ್ನು ಮಾಡಿ ಅಥವಾ ಮಾಡಿಸಿಕೊಂಡೋ, ಸ್ನಾನಮಾಡುವುದು ಕೇವಲ ಆರೋಗ್ಯಕ್ಕಾಗಿ. ಯಾವನೊಬ್ಬನು ಮೃತದೇಹವನ್ನು ಮುಟ್ಟಿದ ಮೇಲೆ ಅಥವಾ ಎಣ್ಣೆಯನ್ನು ಹಚ್ಚಿಕೊಂಡ ಮೇಲೆ ಸ್ನಾನ ಮಾಡದಿದ್ದರೆ ನೀವು ಅವನನ್ನು ಬೇಕಾದರೆ ಹೇಸಿಯೆಂದು ಕರೆಯಿರಿ. ಆದರೆ ಅವನು ಪಾತಕಿಯೂ ಅಲ್ಲ. **ಪಾಪಿಯೂ ಅಲ್ಲ.** ಇದೇ ಪ್ರಕಾರ ತಾಯಿಯು ತನ್ನ ಕೂಸಿನ ಶವವನ್ನು ಹೊತ್ತೊಯ್ದ ಮೇಲೆ ಮೈಯನ್ನು ತೊಳಿದುಕೊಳ್ಳುವವರೆಗಾಗಲಿ ಅಥವಾ ಕೈಕಾಲುಗಳನ್ನು ತೊಳಿದುಕೊಳ್ಳುವವರೆಗಾಗಲಿ ಆಕೆಯು ಅಸ್ಪೃಶ್ಯಳು. ಆದರೆ ಹುಡುಗನು ಆಡುವಾಗ ಅವಳನ್ನು ಮುಟ್ಟಿದರೆ ಆಕೆಗಾಗಲಿ ಆಕೆಯ ಆತ್ಮಕ್ಕಾಗಲಿ, ಮೈಲಿಗೆಯಾಗುವುದಿಲ್ಲ. ತಿರಸ್ಕಾರಪೂರ್ವಕ ಹೆಸರಿನಿಂದ ಕರೆಯಿಸಿಕೊಳ್ಳುವ ಭಂಗಿಗಳು, ಹೊಲೆಯರು, ಮೊಚ್ಚೆಗಾರರು, ಮುಂತಾದವರನ್ನು ಜನ್ಮದಿಂದಲೇ ಅಸ್ಪೃಶ್ಯರೆಂದು ತಿಳಿಯಲಾಗುತ್ತದೆ. ಅಸ್ಪೃಶ್ಯನೆನಿಸಿಕೊಳ್ಳುವವನು ಎಷ್ಟೋ ವರ್ಷಗಳವರೆಗೆ ನೂರಾರು ಸಬಕಾರಗಳನ್ನು ಹಚ್ಚಿ ತಿಕ್ಕಿ ತನ್ನ ಮೈಯನ್ನು ಸ್ವಚ್ಛ ಮಾಡಿಕೊಂಡಿರಲಿ; ಬೇಕಾದ ಹಾಗೆ ವೈಷ್ಣವರಂತೆ ವಸ್ತ್ರಧಾರಣ ಮಾಡಿರಲಿ; ತುಳಸೀಮಣಿಯನ್ನು ಕೊರಳೊಳಗೆ ಹಾಕಿರಲಿ; ಪ್ರತಿನಿತ್ಯ ಎಷ್ಟೋ ಸಲ ಗೀತಾಪಾರಾಯಣವನ್ನು ಮಾಡಲಿ; ಅವನ ಉದ್ಯೋಗವು ಲೇಖಕನದಾಗಿರಲಿ, ಆದರೂ ಅವನು ಅಸ್ಪೃಶ್ಯನೇ! ಹೀಗೆ ಯಾವುದು ಧರ್ಮವೆಂದು ತಿಳಿಯುತ್ತೇವೋ, ಆಚರಿಸುತ್ತೇವೋ, ಅದು ಧರ್ಮವಲ್ಲ ಅಧರ್ಮವು. ಇದು ನಾಶಕ್ಕೆ ಯೋಗ್ಯವಿರುತ್ತದೆ. ಅಸ್ಪೃಶ್ಯತಾ ನಿವಾರಣೆಗೆ ವ್ರತದ ಸ್ವರೂಪವನ್ನು ಕೊಟ್ಟ ಕಾರಣ ನಾವು ತಿಳಿಯುವುದೇನಂದರೆ:— ಅಸ್ಪೃಶ್ಯತೆಯು ಹಿಂದೂ ಧರ್ಮದೊಳಗಿನ

ಒಂದು ಭಾಗವಲ್ಲ; ಅದೊಂದು ಹಿಂದೂ ಧರ್ಮದೊಳಗೆ ಹಿಂದಿನಿಂದ ಸೇರಿದ ಕೊಳೆಯು, ಭ್ರಾಂತಿಯು, ಪಾಪವು. ಆದುದರಿಂದ ಅದನ್ನು ತೆಗೆದು ಹಾಕುವುದು ಪ್ರತಿಯೊಬ್ಬ ಹಿಂದುವಿನ ಧರ್ಮವಾಗಿದೆ. ಪವಿತ್ರ ಕರ್ತವ್ಯಕರ್ಮವಾಗಿದೆ. ಅಸ್ಪೃಶ್ಯತೆಯು ಪಾಪವೆಂದು ತಿಳಿಯುವವರು ಅದಕ್ಕೆ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲಿ. ತಿಳಿವಳಿಕೆಯುಳ್ಳ ಹಿಂದೂ ಜನರು ಅಸ್ಪೃಶ್ಯರೆಂದೆನ್ನಿಸುವ ಅಣ್ಣ ತಮ್ಮಂದಿರನ್ನೂ ಅಕ್ಕ ತಂಗೆಯರನ್ನೂ ಧರ್ಮವೆಂದು ತಿಳಿದು ತಮ್ಮವರನ್ನಾಗಿ ಮಾಡಿಕೊಳ್ಳಬೇಕು; ಮಮತಾಪೂರ್ವಕ ಸೇವಾಭಾವದಿಂದ ಆವರನ್ನು ಸ್ಪರ್ಶ ಮಾಡುವುದರಿಂದ ತಾವು ಪವಿತ್ರರಾಗುತ್ತೇವೆಂದು ತಿಳಿಯಬೇಕು. ಅವರ ದುಃಖಗಳನ್ನು ದೂರ ಮಾಡಬೇಕು. ಎಷ್ಟೋ ಕಾಲದಿಂದಲೂ ಅವರನ್ನು ಹತ್ತೊತ್ತಿಟ್ಟಿದ್ದರಿಂದ ಅವರಲ್ಲಿ ಸೇರಿಕೊಂಡಿರುವ ಅಜ್ಞಾನಾದಿ ದೋಷಗಳನ್ನು ತೆಗೆದುಹಾಕಲಿಕ್ಕೆ ತಾಳ್ಮೆಯಿಂದ ಅವರಿಗೆ ತಾವು ಸಹಾಯ ಮಾಡುವುದಲ್ಲದೆ ಬೇರೆ ಜನರಿಗೂ ಅದರಂತೆ ಮಾಡಲಿಕ್ಕೆ ತಿಳಿಸಬೇಕು, ಪ್ರೇರಿಸಬೇಕು. ಈ ದೃಷ್ಟಿಯಿಂದ ಅಸ್ಪೃಶ್ಯತೆಯನ್ನು ನಿರೀಕ್ಷಣೆ ಮಾಡಲು ಅಸ್ಪೃಶ್ಯತೆಯನ್ನು ತೆಗೆದು ಹಾಕುವುದರಿಂದ ಉಪಯೋಗವಾಗುವ ಐಹಿಕ ಪರಿಣಾಮಗಳೂ ರಾಜಕೀಯ ಪರಿಣಾಮಗಳೂ ಅದರ ವ್ರತಧಾರಿಗೆ ತುಚ್ಛವೆಂದೆನಿಸುವವು. ಐಹಿಕ ಅಥವಾ ರಾಜಕೀಯ ಪರಿಣಾಮಗಳು ಸಂಭವಿಸಲಿ, ಅಥವಾ ಸಂಭವಿಸದೆ ಇರಲಿ ಅಸ್ಪೃಶ್ಯತಾ ನಿವಾರಣೆಯು ತನ್ನ ವ್ರತವೆಂದಾಚರಿಸುವವನು, ಅಸ್ಪೃಶ್ಯರೆಂದೆನ್ನಿಸುವವರನ್ನು ತನ್ನವರನ್ನಾಗಿ ಮಾಡಿಕೊಳ್ಳುವನು. ಸತ್ಯಾದಿ ವ್ರತಗಳನ್ನು ಆಚರಿಸುವಾಗ ನಾವು ಐಹಿಕ ಪರಿಣಾಮಗಳ ಕಡೆಗೆ ಲಕ್ಷ್ಯಕೊಡಬಾರದು. ಸತ್ಯವ್ರತಧಾರಿಗೆ ಸತ್ಯಾಚರಣೆಯು ಒಂದು ಯುಕ್ತಿ-ಧೋರಣ-ಅಲ್ಲ, ಅದು ಅವನ ದೇಹಕ್ಕೆ ಅಂಟಿಕೊಂಡಿರುವ ಒಂದು ವಸ್ತುವಿನಂತಿರಬೇಕು, ಅದು ಅವನ ಸ್ವಭಾವವಾಗಿರಬೇಕು. ಅಸ್ಪೃಶ್ಯತಾ ನಿವಾರಣೆಯೂ ಅದರ ವ್ರತಧಾರಿಗೆ ಇದೇ ರೀತಿಯಲ್ಲಿರಬೇಕು. ಅಸ್ಪೃಶ್ಯತೆಯ ಮಹತ್ವವು ತಿಳಿಯಿತೆಂದರೆ ಈ ಕೊಳೆಯು ಕೇವಲ ಭಂಗಿ ಮತ್ತು ಹೊಲೆಯರ ವಿಷಯಕ್ಕೆ ಮಾತ್ರ ಇರುವುದಿಲ್ಲೆಂದು ಗೊತ್ತಾಗುವುದು. ಮೊದಲು ಕಡ್ಡಿ ಇದ್ದದ್ದು ಗುಡ್ಡವಾಗಿ ಕಡೆಗೆ, ತಾನು ಪ್ರವೇಶ ಮಾಡಿದ ವಸ್ತುವನ್ನು ನಾಶಮಾಡುವುದು ಕೊಳಚೆಯ ಗುಣಧರ್ಮವಾಗಿದೆ. ಅಸ್ಪೃಶ್ಯತೆಯಾದರೂ ಇದರಂತೆಯೇ

ಇರುತ್ತದೆ. ಈ ಪ್ರೈಲಿಗೆಯು ಅನ್ಯಧರ್ಮಗಳ ದೆಸೆಯಿಂದಲೂ ಅನ್ಯ ಸಂಪ್ರದಾಯಗಳ ದೆಸೆಯಿಂದಲೂ ಬಂದಿರುವದಲ್ಲದೆ, ಒಂದೇ ಸಂಪ್ರದಾಯದಲ್ಲಿ ಮಿತಿಮೀರಿ ಹೋಗಿರುವುದನ್ನೂ ನಾವು ನೋಡುತ್ತೇವೆ. ಕೆಲವರಂತೂ ಅಸ್ಪೃಶ್ಯತೆಯನ್ನು ಪಾಲಿಸುತ್ತ ಪಾಲಿಸುತ್ತ ಭೂಮಿಯ ಮೇಲೆ ಭಾರರೂಪಿಯಾಗಿ ಬಿಟ್ಟಿದ್ದಾರೆ. ತಮ್ಮದನ್ನೇ ಜೋಪಾನ ಮಾಡುವುದರಲ್ಲಿ, ತಮ್ಮವರೊಡನೆ ಸಲುಗೆ ಬೆಳಿಸುವುದರಲ್ಲಿ, ಸ್ನಾನ ಮಾಡುವುದರಲ್ಲಿ, ಒಗೆಯುವುದರಲ್ಲಿ, ತಿನ್ನುವುದರಲ್ಲಿ, ಕುಡಿಯುವುದರಲ್ಲಿ, ಬಿಡುವೇ ದೊರೆಯುವುದಿಲ್ಲ. ಈಶ್ವರನ ಹೆಸರಿನಿಂದ ಈಶ್ವರನನ್ನು ಮರೆತು ಸ್ವಯಂ ಪೂಜೆಯನ್ನು ಮಾಡತೊಡಗಿದ್ದಾರೆ. ಅಸ್ಪೃಶ್ಯತೆಯ ನಿವಾರಣೆಯನ್ನು ಮಾಡುವವನು ಹೊಲೆಯರನ್ನೂ ಮಾದಿಗರನ್ನೂ ತನ್ನವರನ್ನಾಗಿ ಮಾಡಿಕೊಂಡು ಸಂತೋಷಪಟ್ಟ ಹೊರತು, ಪ್ರಾಣಿ ಮಾತ್ರಗಳನ್ನೆಲ್ಲ ತನ್ನಂತೆ ನೋಡಿದ ಹೊರತು, ತನ್ನನ್ನು ಪ್ರಾಣಿಮಾತ್ರಗಳಲ್ಲಿ ಹೋಮ ಮಾಡಿದ ಹೊರತು ಶಾಂತಿಯನ್ನೇ ಹೊಂದಲಾರನು. ಅಸ್ಪೃಶ್ಯತೆಯನ್ನು ತೆಗೆದು ಹಾಕುವುದೆಂದರೆ ಇಡೀ ಜಗತ್ತಿನ ಸಂಗಡ ಮಿತ್ರತ್ವವನ್ನು ಬೆಳೆಯಿಸಿ ತಾನು ಅದರ ಸೇವಕನಾಗುವುದು. ಈ ರೀತಿಯಿಂದ ನೋಡಿದರೆ ಅಸ್ಪೃಶ್ಯತಾ ನಿವಾರಣೆಯು ಅಹಿಂಸೆಯ ಹೊಟ್ಟೆಯಲ್ಲಿಯೇ ಬರುವುದು. ವಸ್ತುತಃ ಹಾಗೆ ಇದ್ದೇ ಇದೆ. ಅಹಿಂಸೆಯೆಂದರೆ ಪ್ರಾಣಿಮಾತ್ರಗಳ ವಿಷಯಕ್ಕೆ ಸಂಪೂರ್ಣ ಪ್ರೇಮವು. ಅಸ್ಪೃಶ್ಯತಾ ನಿವಾರಣೆಯೆಂದರೂ ಇದೇ ಅರ್ಥವಾಗುತ್ತದೆ. ಜೀವಮಾತ್ರಗಳೊಳಗಿನ ಭೇದವನ್ನಳಿಯುವುದೇ ಅಸ್ಪೃಶ್ಯತಾ ನಿವಾರಣೆಯು. ಈ ರೀತಿಯಿಂದ ಅಸ್ಪೃಶ್ಯತೆಯ ವಿಚಾರ ಮಾಡಿದರೆ ಇಂತಹ ದೋಷವು ಹೆಚ್ಚು ಕಡಿಮೆ ಪ್ರಮಾಣದಿಂದ ಜಗತ್ತಿನಲ್ಲೆಲ್ಲವೂ ವ್ಯಾಪಿಸಿಕೊಂಡುದು ಕಂಡುಬರುವುದು. ಆದರೆ ಇಲ್ಲಿ ಹಿಂದೂ ಧರ್ಮದಲ್ಲಿರುವ ಕೊಳೆಯ ರೂಪದಿಂದ ಅದರ ವಿಚಾರವನ್ನು ಮಾಡಲಾಗಿದೆ. ಏಕೆಂದರೆ ಇದು ಹಿಂದೂ ಧರ್ಮದಲ್ಲಿ ಧರ್ಮದ ಸ್ಥಾನವನ್ನು ಒತ್ತಾಯದಿಂದ ತೆಗೆದುಕೊಂಡಿದೆ. ಇದು ಧರ್ಮದ ಹೆಸರಿನಿಂದ ಲಕ್ಷಾವಧಿಯೇ ಅಲ್ಲ, ಕೋಟ್ಯವಧಿ ಜನರ ಸ್ಥಿತಿಯನ್ನು ಗುಲಾಮರಂತೆ ಮಾಡಿಬಿಟ್ಟಿದೆ.

---

*

# ೯ ಕಾಯಕ +

೧೬-೯-೩೩

ಮಂಗಲ ಪ್ರಭಾತ

ಕಾಯಕವು ಮನುಷ್ಯ ಪ್ರಾಣಿಗೆಲ್ಲ ಅನಿವಾರ್ಯವೆಂಬ ಮಾತು ನನಗೆ ಮೊದಲು ಚೆನ್ನಾಗಿ ಮನಸ್ಸಿನಲ್ಲಿ ನಟ್ಟದ್ದು ಟಾಲಸ್ಟಾಯನ ಒಂದು ನಿಬಂಧದ ಮೇಲಿಂದ. ಈ ವಿಷಯವು ನನಗೆ ಅಷ್ಟೊಂದು ಸ್ಪಷ್ಟವಾಗಿ ತಿಳಿದಿರದಿದ್ದರೂ ರಸ್ಕಿನ್ನನ 'ಅಂಟು ದಿ ಲಾಸ್ಟ'* ಎಂಬ ಪುಸ್ತಕವನ್ನು ಓದಿದೊಡನೆಯೇ ಇದನ್ನು ನನ್ನ ಆಚರಣೆಯಲ್ಲಿ ತರಲು ತೊಡಗಿದ್ದೆನು. ಕಾಯಕವು 'ಬ್ರೆಡ್ ಲೇಬರ' ಎಂಬ ಇಂಗ್ರೇಜಿ ಶಬ್ದಕ್ಕೆ ಸರಿಯಾದ ಕನ್ನಡ ಶಬ್ದವು. 'ಬ್ರೆಡ್ ಲೇಬರ'ದ ಶಬ್ದಶಃ ಭಾಷಾಂತರವು ರೊಟ್ಟಿಯ ದುಡಿಮೆ ಎಂದು. ರೊಟ್ಟಿಯ ಸಲುವಾಗಿ ಪ್ರತಿಯೊಬ್ಬ ಮನುಷ್ಯನು ದುಡಿಯಲೇಬೇಕು. ಮೈಮುರಿದು ದೇಹವನ್ನು ಸವೆಯಿಸುವದು ಈಶ್ವರೀನಿಯಮವಿರುತ್ತದೆಂಬ ಮೂಲ ಶೋಧವು ಟಾಲಸ್ಟಾಯನದಲ್ಲ; ಅವನಿಗಿಂತ ಮೊದಲಿನವನೂ ಬಹು ಜನರಿಗೆ ಅಪರಿಚಿತನೂ ಆದ 'ಬರ್ನ್ಡೋರ್ಫ' ಎಂಬ ರಶಿಯನ್ ಲೇಖಕನದು. ಈ ನಿಯಮಕ್ಕೆ ಟಾಲಸ್ಟಾಯನು ಮಹತ್ವವನ್ನು ಕೊಟ್ಟು ತನ್ನದನ್ನಾಗಿ ಮಾಡಿಕೊಂಡನು. ಇದೇ ಮಾತನ್ನು ನಾನು ಭಗವದ್ಗೀತೆಯ ಮೂರನೆಯ ಅಧ್ಯಾಯದಲ್ಲಿ ಕಂಡಿರುತ್ತೇನೆ. "ಯಜ್ಞ ಮಾಡದೆ ಉಣ್ಣುವವನು ತುಡುಗಿನ ಅನ್ನವನ್ನು ಉಣ್ಣುತ್ತಾನೆ" ಎಂಬ ಭಯಂಕರ 'ಶಾಪವು' ಯಜ್ಞ ಮಾಡದವನಿಗೆ ಇದೆ. ಇಲ್ಲಿ ಯಜ್ಞದ ಅರ್ಥವನ್ನು ಕಾಯಕ ಅಥವಾ ರೊಟ್ಟಿಯ ದುಡಿಮೆ ಎಂದು ಮಾಡಿದರೆಯೇ ಹೆಚ್ಚು ಶೋಭಿಸುತ್ತದೆ. ನನ್ನ ಮತದ ಪ್ರಕಾರ ಅದು ಹಾಗೆಯೇ ಇರುತ್ತದೆ. ಇದು ನಮ್ಮ ವ್ರತದ ಉತ್ಪತ್ತಿಯು.

---

+ ಗಾಂಧಿಜೀಯವರು ಗುಜರಾತಿಯಲ್ಲಿ 'ಜಾತಮೆಹನತ' ಎಂದು ಹೇಳಿರುವ ಶಬ್ದಕ್ಕೆ ಸರಿಯಾಗಿ ನಮ್ಮ ವೀರಶೈವ ವಚನ ಸಾಹಿತ್ಯದಲ್ಲಿ 'ಕಾಯಕ' ಎಂಬ ಪದವನ್ನು ಉಪಯೋಗಿಸಲಾಗಿದೆ. ಆದುದರಿಂದ ನಾವು ಅದನ್ನೇ ಉಪಯೋಗಿಸಿದ್ದೇವೆ.

* ಸರ್ವೋದಯ— 'ಅಂಟು ಧಿಸ್ ಲಾಸ್ಟ' ಎಂಬುದರ ಗಾಂಧಿಜೀಯವರ ಗುಜರಾತಿ ಭಾಷಾಂತರವು.

ಬುದ್ಧಿಯು ಸಹ ನಮ್ಮನ್ನು ಇತ್ತ ಕಡೆಗೇ ಎಳೆದೊಯ್ಯುತ್ತದೆ. ದುಡಿಯದವನಿಗೆ ಉಣ್ಣುವ ಅಧಿಕಾರವೆಲ್ಲಿಯದು? ಈ ವಿಷಯದಲ್ಲಿ ಬಾಯಬಲ್ ಹೇಳುವುದೇನಂದರೆ:– 'ನೀನು ನಿನ್ನ ರೊಟ್ಟಿಯನ್ನು ನಿನ್ನ ಬೆವರು ಹನಿಗಳಿಂದಲೇ ದೊರಕಿಸು ಮತ್ತು ಅದನ್ನೇ ತಿನ್ನು.' ಕೋಟ್ಯಧೀಶನಾದರೇನು? ತನ್ನ ಮಂಚದ ಮೇಲೆಯೇ ಹೊರಳಾಡುತ್ತಿದ್ದು ಯಾರಾದರೂ ಅನ್ನವನ್ನು ತಂದು ಅವನ ಬಾಯಲ್ಲಿ ಹಾಕಿದಾಗಲೇ ಉಣ್ಣಹತ್ತಿದರೆ, ಅವನು ಬಹಳ ದಿವಸಗಳ ವರೆಗೆ ಉಣ್ಣಲಾರನು. ಅಂತಹ ಅನ್ನದಲ್ಲಿ ರುಚಿಯೂ ಉಂಟಾಗಲಾರದು. ಆದುದರಿಂದಲೇ ವ್ಯಾಯಾಮ ಮುಂತಾದವುಗಳನ್ನು ಮಾಡಿ ಹಸಿವೆಯನ್ನು ಹುಟ್ಟಿಸಿಕೊಳ್ಳುತ್ತಾನೆ. ಅವನು ಉಣ್ಣುವುದಾದರೂ ತನ್ನ ಕೈ ಬಾಯಿಗಳ ಚಲನವಲನದಿಂದಲೇ. ಹೀಗೆ ಒಂದಿಲ್ಲೊಂದು ರೀತಿಯಿಂದ ಕಾಯಕವನ್ನು-ಅರಸನೇ ಇರಲಿ ತಿರುಕನೇ ಇರಲಿ- ಎಲ್ಲರೂ ಮಾಡಲೇಬೇಕಾಗುತ್ತಿದೆಯೆಂದ ಮೇಲೆ ರೊಟ್ಟಿಯನ್ನು ಹುಟ್ಟಿಸುವ ಕಷ್ಟವನ್ನು ಎಲ್ಲರೂ ಯಾಕೆ ಮಾಡಬಾರದೆಂಬ ಪ್ರಶ್ನೆಯು ತಾನಾಗಿಯೇ ಹುಟ್ಟುತ್ತದೆ. ಒಕ್ಕಲಿಗನಿಗೆ ಹವೆಯನ್ನು ತೆಗೆದುಕೊಳ್ಳಲಿಕ್ಕಾಗಲೀ ವ್ಯಾಯಾಮ ಮಾಡಲಿಕ್ಕಾಗಲೀ ಯಾರೂ ಹೇಳುವುದಿಲ್ಲ. ಜಗತ್ತಿನಲ್ಲಿ ನೂರಕ್ಕೆ ತೊಂಬತ್ತಕ್ಕಿಂತಲೂ ಹೆಚ್ಚು ಜನರ ಹೊಟ್ಟೆಯು ಒಕ್ಕಲತನದಿಂದಲೇ ಸಾಗುತ್ತದೆ. ಇದರ ಅನುಕರಣವನ್ನು ಉಳಿದ ಹತ್ತು ಜನರೂ ಮಾಡಿದರೆ ಜಗತ್ತಿನಲ್ಲಿ ಎಷ್ಟು ಸುಖಶಾಂತಿಗಳು ನೆಲೆಗೊಳ್ಳಬಹುದು! ಎಷ್ಟು ಆರೋಗ್ಯವು ಹಬ್ಬಬಹುದು! ಒಕ್ಕಲತನಕ್ಕೆ ಬುದ್ಧಿಯ ಜೊತೆ ಮಾಡಿದರೆ ಅದರಲ್ಲಿ ಕಂಡುಬರುವ ಅನೇಕ ಕಷ್ಟನಷ್ಟಗಳು ದೂರವಾಗುವವು. ಅಲ್ಲದೆ ಶಾರೀರಿಕ ಶ್ರಮದ ಈ ನಿರಪವಾದ ನಿಯಮಕ್ಕೆ ಎಲ್ಲರೂ ಮಾನಕೊಟ್ಟರೆ ಉಚ್ಚನೀಚವೆಂಬ ಭಾವನೆಯೇ ಅಳಿದುಹೋಗುವುದು. ಈಗಂತೂ ಉಚ್ಚ ನೀಚವೆಂಬ ಗಂಧವು ಸಹ ಇರದ ವರ್ಣವ್ಯವಸ್ಥೆಯಲ್ಲಿಯೂ ಇದರ ಪ್ರವೇಶವಾಗಿದೆ. ಆಳು ಒಡೆಯರೆಂಬ ಭೇದವು ಸರ್ವವ್ಯಾಪಿಯಾಗಿದ್ದು, ಬಡವರು ಶ್ರೀಮಂತರನ್ನು ನೋಡಿ ಹೊಟ್ಟೇಕಿಚ್ಚುಪಡುತ್ತಾರೆ. ಎಲ್ಲರೂ ತಮ್ಮ ತಮ್ಮ ರೊಟ್ಟಿಯ ಸಲುವಾಗಿ ದುಡಿದರೆ ಉಚ್ಚನೀಚವೆಂಬ ಭಾವನೆಯು ಇಲ್ಲದಂತಾಗುವುದು. ಆ ಮೇಲೆಯೂ ಶ್ರೀಮಂತ ವರ್ಗವು ಹಾಗೆಯೇ ಉಳಿಯುವುದು. ಆಗ ಮಾತ್ರ ಅವರು ತಮ್ಮನ್ನು ಒಡೆಯರು ಎಂದು ತಿಳಿದುಕೊಳ್ಳದೆ ತಮ್ಮ ಹಣದ ಕಾವಲು

ಗಾರರು ಅಥವಾ ಟ್ರಸ್ಟಿಗಳೆಂದು ಭಾವಿಸಿ ಆ ಹಣದ ಉಪಯೋಗವನ್ನು ಮುಖ್ಯವಾಗಿ ಲೋಕಸೇವೆಗಾಗಿ ಮಾಡುವರು. ಅಹಿಂಸಾ ವ್ರತವನ್ನಾಚರಿಸುವುದೂ ಸತ್ಯದ ಆರಾಧನೆಯನ್ನು ಮಾಡುವುದೂ ಬ್ರಹ್ಮಚರ್ಯವನ್ನು ತನ್ನ ಸ್ವಭಾವವನ್ನಾಗಿ ಮಾಡಿಕೊಳ್ಳುವುದೂ ಇದ್ದವನಿಗೆ ಕಾಯಕವು ಅತ್ಯವಶ್ಯಕವಾದುದು. ನಿಜವಾಗಿ ನೋಡಿದರೆ ಕಾಯಕವೆಂದರೆ ಒಕ್ಕಲತನವೇ. ಆದರೆ ಈಗಿನ ಕಾಲದಲ್ಲಿ ಎಲ್ಲರೂ ಅದನ್ನೇ ಮಾಡುವ ಸ್ಥಿತಿಯು ಇಲ್ಲ. ಆದುದರಿಂದ ಹೊಲವನ್ನೇ ಆದರ್ಶವಸ್ತುವನ್ನಾಗಿ ಮನಸ್ಸಿನಲ್ಲಿಟ್ಟುಕೊಂಡು, ಅದಕ್ಕೆ ಬದಲಾಗಿ ನೂಲುವದು, ನೇಯುವದು, ಬಡಿಗತನ, ಕಮ್ಮಾರಿಕೆ, ಮುಂತಾದವುಗಳಲ್ಲಿ ತಮಗೆ ಬೇಕಾದ ಉದ್ಯೋಗವನ್ನೂ ಮಾಡಬಹುದು. ಎಲ್ಲರೂ ತಮ್ಮ ತಮ್ಮ ಭಂಗಿಗಳಂತೂ ಆಗಲೇಬೇಕು. ಉಣ್ಣುವವನಿಗೆ ಮಲತ್ಯಾಗವು ಹೇಗೆ ತಪ್ಪೀತು? ಆದುದರಿಂದ ಮಲತ್ಯಾಗ ಮಾಡುವವನು ತನ್ನ ಮಲವನ್ನು ತಾನೇ ಹೊರಕ್ಕೆ ದಾಟಿಸುವದು ಉತ್ತಮ ಪದ್ಧತಿಯಾಗಿದೆ. ಇದು ಶಕ್ಯವೇ ಇಲ್ಲದಿದ್ದರೆ, ಪ್ರತಿಯೊಂದು ಕುಟುಂಬದವರು ತಮ್ಮ ತಮ್ಮ ಕರ್ತವ್ಯವನ್ನು ಮಾಡಬೇಕು. ಭಂಗಿಗಳದೊಂದು ಸ್ವತಂತ್ರ ಉದ್ಯೋಗವನ್ನೇ ನಿರ್ಮಾಣ ಮಾಡಿರುವುದರಲ್ಲಿ ಮಹಾದೋಷವೊಂದು ಕೂಡಿಕೊಂಡಿರುವುದೆಂದು ನನಗಂತೂ ಎಷ್ಟೋ ವರ್ಷಗಳಿಂದ ಅನಿಸಹತ್ತಿದೆ. ಈ ಅವಶ್ಯಕವಾದ, ಆರೋಗ್ಯಪೋಷಕವಾದ ಕಾರ್ಯವನ್ನು ಅತ್ಯಂತ ನೀಚ ಕರ್ಮಗಳಲ್ಲಿ ನೀಚವೆಂದು ಮೊದಲು ಯಾರ ಮನಸ್ಸಿನಲ್ಲಿ ಬಂತೆಂಬುದರ ಇತಿಹಾಸವು ನಮ್ಮಲ್ಲಿಲ್ಲ. ಹೀಗೆ ತಿಳಿದವರು ನಮ್ಮ ಮೇಲೆ ಉಪಕಾರವನ್ನೇನೂ ಮಾಡಿಲ್ಲ. ನಾವೆಲ್ಲರೂ ಭಂಗಿಗಳಿದ್ದೇವೆಂಬ ಭಾವನೆಯು ಬಾಲ್ಯದಿಂದಲೂ ನಮ್ಮ ಮನಸ್ಸಿನಲ್ಲಿ ನೆಡಲಿಕ್ಕೆ ಬೇಕು. ಹೀಗೆ ಮನಸ್ಸಿನಲ್ಲಿ ನೆಡುವುದಕ್ಕೆ ಅತ್ಯಂತ ಸುಲಭವಾದ ಸಾಧನವೆಂದರೆ ಅದರ ಮಹತ್ವವನ್ನರಿತವರು ಕಾಯಕದ ಆರಂಭವನ್ನು ಶೌಚಕೂಪವನ್ನು ಸ್ವಚ್ಛ ಮಾಡುವದರಿಂದ ಆರಂಭ ಮಾಡಬೇಕು. ಹೀಗೆ ಜ್ಞಾನಪೂರ್ವಕವಾಗಿ ಮಾಡುವವರಿಗೆ ಆ ಕ್ಷಣದಿಂದಲೇ ಧರ್ಮದ ವಿಷಯದಲ್ಲಿ ಪ್ರತ್ಯೇಕವಾದ ಸತ್ಯದ ದೃಷ್ಟಿಯುಂಟಾಗುವುದು. ಬಾಲಕರು, ಮುದುಕರು, ರೋಗದಿಂದ ಪೀಡಿತರಾದವರು ದುಡಿಯದಿದ್ದರೆ ಅದನ್ನು ಯಾರೂ ಅಪ

ವಾದವೆಂದು ತಿಳಿಯಬಾರದು. ಬಾಲಕರು * ತಾಯಂದಿರಲ್ಲಿಯೇ ಸಮಾವೇಶವಾಗುತ್ತಾರೆ. ನೈಸರ್ಗಿಕ ನಿಯಮದ ಉಲ್ಲಂಘನೆಯಾಗದಿದ್ದರೆ ಮುದುಕರೂ ಪರಾಧೀನರಾಗಬಾರದು. ಎಂದ ಮೇಲೆ ರೋಗಕ್ಕೆ ಸ್ಥಾನವೆಲ್ಲಿ?

---

# ೧೦ ಸರ್ವಧರ್ಮ ಸಮಭಾವ (೧)

ತಾ. ೨೩ - ೯ - ೩೦

ಮಂಗಲ ಪ್ರಭಾತ

ನಮ್ಮ ವ್ರತಗಳಲ್ಲಿ ಸಹಿಷ್ಣುತೆಯೆಂದು ಕರೆಯಲ್ಪಡುವ ವ್ರತಕ್ಕೇ ಈ ಹೊಸ ಹೆಸರನ್ನು ಕೊಟ್ಟಿದೆ. ಸಹಿಷ್ಣುತೆಯೆಂಬುದು 'ಟಾಲರೇಶನ್' ಎಂಬ ಇಂಗ್ರೇಜಿ ಶಬ್ದದ ಅನುವಾದವು. ಈ ಶಬ್ದವು ನನ್ನ ಮನಸ್ಸಿಗೆ ಬಂದಿರಲಿಲ್ಲ; ಬೇರೆ ಶಬ್ದವೂ ಹೊಳೆಯದಾಗಿತ್ತು. ಕಾಕಾಸಾಹೇಬರ ಮನಸ್ಸಿಗೂ ಇದು ಬಂದಿರಲಿಲ್ಲ. ಅವರು 'ಸರ್ವಧರ್ಮ ಆದರ' ಎಂಬ ಶಬ್ದವನ್ನು ಸೂಚಿಸಿದರು. ಇದೂ ನನಗೆ ರುಚಿಸಲಿಲ್ಲ. ಸಹಿಷ್ಣುತೆಯೆಂದರೆ ಸಹನ ಮಾಡುವುದು ಎಂದರ್ಥ. ಸಹನ ಮಾಡುವುದೆಂದರೆ ಎರಡನೆಯ ಧರ್ಮಗಳಲ್ಲಿ ಕೊರತೆಗಳು ಇವೆ ಎಂದು ಗ್ರಹಿತವಾಗುತ್ತದೆ. ಆದರದಲ್ಲಿ ಕೃಪಾದೃಷ್ಟಿಯ ಭಾವವುಂಟಾಗುತ್ತದೆ. ಅಹಿಂಸೆಯು ನಮಗೆ ಎರಡನೆಯ ಧರ್ಮಗಳ ಬಗ್ಗೆ ಸಮಭಾವವನ್ನು ಕಲಿಸುತ್ತದೆ. ಆದರ, ಸಹಿಷ್ಣುತೆಗಳಲ್ಲಿಯ ಅರ್ಥವು ಅಹಿಂಸೆಯ ದೃಷ್ಟಿಯಿಂದ ಅಷ್ಟೊಂದು ತೃಪ್ತಿಕರವಾಗಿ ಇಲ್ಲ. ಎರಡನೆಯ ಧರ್ಮದ ಬಗ್ಗೆ ಸಮಭಾವವನ್ನು ತಾಳುವುದರಲ್ಲಿಯೇ ತನ್ನ ಧರ್ಮದ ಅಪೂರ್ಣತ್ವದ ಸ್ವೀಕಾರವು ಬಂದು ಹೋಗುತ್ತದೆ. ಸತ್ಯದ ಆರಾಧನೆಯೂ ಅಹಿಂಸೆಯ ಒರೆಗಲ್ಲೂ ಇದನ್ನೇ ಕಲಿಸುತ್ತವೆ. ನಮಗೆ ಸಂಪೂರ್ಣ ಸತ್ಯದ ದರ್ಶನವಾಗಿದ್ದರೆ ಆ ಮೇಲೆ ಸತ್ಯದ ಆಗ್ರಹವೇಕೆ ಬೇಕು? ಹಾಗಾಗಿದ್ದರೆ ನಾವು ಪರಮೇಶ್ವರರಾದೆವು. ಏಕೆಂದರೆ– ಸತ್ಯವೇ ಪರಮೇಶ್ವರನೆಂದು ನಮ್ಮ ಭಾವನೆಯು.

---

* ಪರಿಶಿಷ್ಟದಲ್ಲಿ ವ್ರತ ನಂ. ೭ ಕಾಯಕ ವಿವರಣೆಯನ್ನು ಓದಿರಿ.

ನಮಗೆ ಪೂರ್ಣ ಸತ್ಯದ ದರ್ಶನವಾಗಿಲ್ಲವೆಂತಲೇ ಅದರ ಆಗ್ರಹವನ್ನು ಹಿಡಿದಿದ್ದೇವೆ. ಅದರಿಂದಲೇ ಪುರುಷಾರ್ಥಕ್ಕೆ ಅವಕಾಶವಿದೆ. ಇದರಲ್ಲಿ ನಮ್ಮ ಅಪೂರ್ಣತ್ವದ ಸ್ವೀಕಾರದ ಅಂತರ್ಭಾವವಾಯಿತು. ನಾವು ಅಪೂರ್ಣರಾಗಿರುವಾಗ ನಮ್ಮಿಂದ ಕಲ್ಪಿಸಲಾದ ಧರ್ಮವೂ ಅಪೂರ್ಣವೇ. ಸ್ವತಂತ್ರ ಧರ್ಮವು ಸಂಪೂರ್ಣವಿದೆ. ನಾವು ಹೇಗೆ ಈಶ್ವರನನ್ನು ನೋಡಲಾರೆವೋ ಹಾಗೆ ಧರ್ಮವನ್ನೂ ನೋಡಲಾರೆವು. ನಾವು ಕಲ್ಪಿಸಿದ ಧರ್ಮವು ಅಪೂರ್ಣವಿದೆ. ಅದರಲ್ಲಿ ನಿತ್ಯ ಬದಲಾವಣೆಗಳಾಗುತ್ತಿರುತ್ತವೆ. ಮತ್ತು ಮುಂದೆಯೂ ಆಗುವವು. ಹೀಗಾಗುವುದರಿಂದಲೇ ನಾವು ಉತ್ತರೋತ್ತರ ಉನ್ನತಿಯನ್ನು ಹೊಂದಬಲ್ಲೆವು. ಸತ್ಯದ ಕಡೆಗೆ-ಈಶ್ವರನ ಕಡೆಗೆ ದಿನದಿನಕ್ಕೂ ಮುಂದಕ್ಕೆ ಹೋಗುತ್ತಲೇ ಇರುವೆವು. ಮನುಷ್ಯಕಲ್ಪಿತವಾದ ಎಲ್ಲ ಧರ್ಮಗಳೂ ಅಪೂರ್ಣವೆಂದು ತಿಳಿದ ಮೇಲೆ ಉಚ್ಚ ನೀಚವೆಂಬ ತಿಳಿವಳಿಕೆಯು ಉಳಿಯುವುದಿಲ್ಲ. ಎಲ್ಲ ಧರ್ಮಗಳೂ ಸತ್ಯವಿರುತ್ತವೆ; ಆದರೆ ಅವು ಅಪೂರ್ಣವಿರುವುದರಿಂದ ದೋಷಕ್ಕೆ ಪಾತ್ರವಿರುತ್ತವೆ. ಸಮಭಾವವುಳ್ಳವರಾದ ಮೇಲೆ ಬೇರೆ ಧರ್ಮಗಳಲ್ಲಿಯೂ ದೋಷಗಳನ್ನು ನೋಡಬಲ್ಲೆವು; ನಮ್ಮದರಲ್ಲಿಯೂ ನೋಡುವೆವು. ಈ ಪ್ರಕಾರ ಕಂಡುಬರುವ ದೋಷಗಳಿಗಾಗಿ ಸ್ವಧರ್ಮದ ತ್ಯಾಗವನ್ನು ಮಾಡದೆ ಅದರಲ್ಲಿಯ ದೋಷಗಳನ್ನು ಮಾತ್ರ ತೆಗೆದುಹಾಕಬೇಕು. ಸಮಭಾವವುಳ್ಳವರಾಗುವುದರಿಂದ ಬೇರೆ ಧರ್ಮದಲ್ಲಿ ಏನಾದರೂ ಗ್ರಾಹ್ಯವಾದುದಿದೆಯೆಂದು ತೋರಿದರೆ ಅದಕ್ಕೆ ತನ್ನ ಧರ್ಮದಲ್ಲಿಯೂ ಸ್ಥಾನವನ್ನು ಕೊಡಲಿಕ್ಕೆ ಏಕೆ ಹಿಂದೆಗೆಯಬೇಕು? ಹೀಗೆ ಸ್ಥಾನ ಕೊಡುವುದೇ ಧರ್ಮವೆಂದೆನಿಸಿಕೊಳ್ಳುತ್ತದೆ.

ಎಲ್ಲ ಧರ್ಮಗಳೂ ಈಶ್ವರದತ್ತವಿರುತ್ತವೆ. ಆದರೆ ಅವು ಮನುಷ್ಯಕಲ್ಪಿತವಿರುವುದರಿಂದಲೂ ಮನುಷ್ಯನು ಅವುಗಳನ್ನು ಪ್ರಚಾರ ಮಾಡುವುದರಿಂದಲೂ ಅವು ಅಪೂರ್ಣವಿರುತ್ತವೆ. ಈಶ್ವರದತ್ತ ಧರ್ಮವು ಅಗಮ್ಯವಾದುದು. ಅದನ್ನು ಮನುಷ್ಯನು ತನ್ನ ನುಡಿಯಲ್ಲಿ ಇಡುತ್ತಾನೆ; ಅದರ ಅರ್ಥವನ್ನು ಕೂಡ ಮನುಷ್ಯನೇ ಮಾಡುತ್ತಾನೆ. ಯಾರ ಅರ್ಥವು ಸತ್ಯವಾದದ್ದು? ಮೇಲೆ ಹೇಳಿದ ವಿಚಾರದಿಂದ **ನಡೆಯುವ ವರೆಗೆ ಅವರವರ** ದೃಷ್ಟಿಯಿಂದ ಎಲ್ಲ ಅರ್ಥಗಳೂ ಸತ್ಯವಾದವುಗಳೇ. ಆದರೆ ಎಲ್ಲ ಅರ್ಥಗಳೂ ತಪ್ಪಾಗಿರುವುದೂ ಅಸಂಭವವಲ್ಲ. ಆದ್ದರಿಂದಲೇ

ನಾವು ಎಲ್ಲ ಧರ್ಮಗಳ ಬಗ್ಗೆ ಸಮಭಾವವನ್ನಿಡಬೇಕು. ಇದರಿಂದ ಸ್ವಧರ್ಮದ ಬಗ್ಗೆ ಉದಾಸೀನತೆಯುಂಟಾಗುವುದಿಲ್ಲ. ಇಷ್ಟೇ ಅಲ್ಲ, ತನ್ನ ಧರ್ಮದ ವಿಷಯಕ್ಕೆ ಇದ್ದ ಪ್ರೇಮದಲ್ಲಿಯ ಅಂಧತ್ವವು ನಾಶವಾಗಿ, ಅದು ಜ್ಞಾನಮಯವಾಗುತ್ತದೆ. ಅದರಿಂದ ನಮ್ಮ ಧರ್ಮ ಪ್ರೇಮವು ಹೆಚ್ಚು ಸಾತ್ವಿಕವೂ ನಿರ್ಮಲವೂ ಆಗುತ್ತದೆ. ಎಲ್ಲ ಧರ್ಮಗಳ ಬಗ್ಗೆ ಸಮಭಾವವು ಬಂದಾಗಲೇ ನಮ್ಮ ದಿವ್ಯ ಚಕ್ಷುಗಳು ತೆರೆಯುತ್ತವೆ. ಧರ್ಮಾಂಧತೆ, ದಿವ್ಯ ದರ್ಶನ ಇವುಗಳ ನಡುವೆ ಉತ್ತರ ದಕ್ಷಿಣಗಳಷ್ಟು ಅಂತರವಿದೆ. ಧರ್ಮಜ್ಞಾನವಾಗುವುದರಿಂದ ತೊಂದರೆಗಳು ಹೊರಟು ಹೋಗಿ ಸಮಭಾವ - ಸಹಾನುಭೂತಿಗಳು ಉತ್ಪನ್ನವಾಗುತ್ತವೆ. ಈ ಸಮಭಾವವನ್ನು ಬೆಳೆಯಿಸುವದರಿಂದ ನಮ್ಮ ಧರ್ಮವು ನಮಗೆ ಹೆಚ್ಚು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಇಲ್ಲಿ ಧರ್ಮ, ಅಧರ್ಮಗಳೊಳಗಿನ **ಭೇದವು ಅಳಿಯುವುದಿಲ್ಲ;** ನಾವು ಧರ್ಮವೆಂದು ತಿಳಿದದ್ದರ ವಿಷಯವಾಗಿ ಪ್ರಶ್ನವಿದೆ. ಎಲ್ಲ ಧರ್ಮಗಳಲ್ಲಿಯ ಮೂಲ ಸಿದ್ಧಾಂತಗಳು ಒಂದೇ. ಅವೆಲ್ಲವುಗಳಲ್ಲಿಯೂ ಸ್ತ್ರೀಪುರುಷ ಸಾಧುಸಂತರು ಆಗಿ ಹೋಗಿದ್ದಾರೆ. ಈಗಲೂ ಇರುತ್ತಾರೆ. ಅಂದರೆ ಧರ್ಮಗಳ ಬಗ್ಗೆ ಇರುವ ಸಮಭಾವಕ್ಕೂ ಧರ್ಮಿಗಳ - ಮನುಷ್ಯರ - ಬಗ್ಗೆ ಇರುವ ಸಮಭಾವಕ್ಕೂ ಸ್ವಲ್ಪ ಭೇದವಿದೆ. ಮನುಷ್ಯನಾದವನು ದುಷ್ಟನೇ ಇರಲಿ, ಶ್ರೇಷ್ಟನೇ ಇರಲಿ, ಧರ್ಮಿಯೇ ಇರಲಿ, ಅಧರ್ಮಿಯೇ ಇರಲಿ, ಅವನ ಸಲುವಾಗಿ ಸಮಭಾವದ ಅಪೇಕ್ಷೆಯಿರುತ್ತದೆ. ಆದರೆ ಅಧರ್ಮದ ಸಲುವಾಗಿ ಎಂದೂ ಇರುವುದಿಲ್ಲ.

ಹೀಗೆಲ್ಲ ಇದ್ದರೆ ಬಹಳ ಧರ್ಮಗಳು ಯಾಕೆಬೇಕು? ಎಂಬ ಪ್ರಶ್ನೆ ಉಂಟಾಗುವುದು. ಬಹಳ ಧರ್ಮಗಳು ಇರುತ್ತವೆಂಬುದು ನಮಗೆ ಗೊತ್ತಿದೆ. ಆತ್ಮವು ಒಂದೇ ಇರುತ್ತದೆ. ಆದರೆ ಮನುಷ್ಯದೇಹಗಳು ಅಸಂಖ್ಯವುಂಟು. ದೇಹದ ಅಸಂಖ್ಯತೆಯನ್ನು ನಾವೆಂದಿಗೂ ಅಳೆಯಲಾರೆವು. ಹೀಗಿದ್ದರೂ ಆತ್ಮದ ಐಕ್ಯವು ನಮಗೆ ಗೊತ್ತಾಗುತ್ತದೆ. ಗಿಡದ ಬೊಡ್ಡೆಯಂತೆ ಧರ್ಮದ ಮೂಲವು ಒಂದೇ ಇರುತ್ತದೆ. ಆದರೆ ಅದರ ಟೊಂಗೆಗಳು ಅಸಂಖ್ಯವುಂಟು.

---

# ೧೧ ಸರ್ವಧರ್ಮ ಸಮಭಾವ (೨)

೩೦-೯-೩೦

ಮಂಗಲ ಪ್ರಭಾತ

ಈ ವಿಷಯದ ಬಗ್ಗೆ ಇನ್ನೂ ಕೆಲವು ಮಾತುಗಳನ್ನು ಹೇಳಬೇಕಾದುದು ಅಗತ್ಯವಿದೆ. ಇಲ್ಲಿ ನನ್ನ ಕೆಲವು ಅನುಭವಗಳನ್ನು ಕೊಟ್ಟರೆ ಸಮಭಾವದ ಅರ್ಥವು ಹೆಚ್ಚು ಸ್ಪಷ್ಟವಾಗುವುದು. ಇಲ್ಲಿಯಂತೆಯೇ ಫಿನಿಕ್ಸದಲ್ಲಿಯೂ,* ದಿನಾಲು ಪ್ರಾರ್ಥನೆಯಾಗುತ್ತಿತ್ತು. ಅದರಲ್ಲಿ ಹಿಂದೂ, ಮುಸಲ್ಮಾನ, ಕ್ರೈಸ್ತ ಎಲ್ಲ ಜನರೂ ಇದ್ದರು. ಸದ್ಗತ ರುಸ್ತುಮ್‌ಜಿ ಶೇಠ ಅಥವಾ ಅವರ ಪುತ್ರರೂ (ಫರ್ಜಚಂದ) ಬಹಳ ಸಾರೆ ಪ್ರಾರ್ಥನೆಗೆ ಬಂದಿರುತ್ತಿದ್ದರು. ರುಸ್ತುಮ್‌ಜಿ ಶೇಠರಿಗೆ

"माने वहालुं वहालुं दादा रामजीनुं नाम"

ಎಂಬ ಪದವು ಬಹಳ ರುಚಿಸುತಿತ್ತು. ನನ್ನ ಸ್ಮರಣಶಕ್ತಿಯ ಪ್ರಕಾರ ಒಮ್ಮೆ ಮಗನಲಾಲರೋ ಅಥವಾ ಕಾಶಿಯೋ ಯಾರೋ ನಮ್ಮೆಲ್ಲರಿಗೂ ಹಾಡನ್ನು ಹೇಳುತ್ತಿದ್ದರು. ರುಸ್ತುಮ್‌ಜಿ ಸೇಠರು ಒಮ್ಮೆಲೆ ಆನಂದದ ಭರದಲ್ಲಿ "'ದಾದಾ ರಾಮಜಿ' ಎಂಬ ಶಬ್ದಕ್ಕೆ ಬದಲು 'ದಾದಾ ಹೋರಮಝ್ದ' ಹಾಡಿರಿ" ಎಂದು ಕೂಗಿದರು. ಆಗ ಹಾಡು ಹೇಳುವವರು, ಅನ್ನುವವರು ಇಬ್ಬರೂ ಈ ವಿಚಾರವನ್ನು ಸಹಜವಾಗಿ ಸ್ವೀಕರಿಸಿ ಬಿಟ್ಟರು. ಅಂದಿನಿಂದ ರುಸ್ತುಮ್‌ಜಿ ಸೇಠಜಿ ಇದ್ದಾಗ ತಪ್ಪದೆ, ಇಲ್ಲದಾಗ ಒಂದೊಂದು ಸಾರೆ 'ದಾದಾ ಹೋರಮಝ್ದ'ರ ಹೆಸರಿನಿಂದ ಹಾಡುತ್ತಿದ್ದೆವು. ಸದ್ಗತ ದಾವುದ ಸೇಠರ ಮಕ್ಕಳಾದ ಸದ್ಗತ ಹುಸೇನನಂತೂ ಬಹಳ ಸಲ ಆಶ್ರಮದಲ್ಲಿಯೇ ಇರುತ್ತಿದ್ದನು. ಅವನು ಪ್ರಾರ್ಥನೆಯಲ್ಲಿ ಬಲು ಉತ್ಸಾಹದಿಂದ ಕೂಡಿಕೊಳ್ಳುತ್ತಿದ್ದನು. ಅವನು ಸ್ವತಃ 'ಆರ್ಗನ್'ದ ಸಂಗಡ 'ಏ ಬಹಾರೆ ಬಾಗ ದುನಿಯಾ ಚಂದರೋಜ' ಎಂಬ ಪದವನ್ನು ಬಲು ಇಂಪಾದ ಸ್ವರದಲ್ಲಿ ಹಾಡುತ್ತಿದ್ದನಲ್ಲದೆ,

---

* ದಕ್ಷಿಣ ಆಫ್ರಿಕೆಯಲ್ಲಿ ದರ್ಬನದ ಹತ್ತರ ಫಿನಿಕ್ಸ್ ಊರಲ್ಲಿ ಗಾಂಧೀಜಿಯವರು ಇಲ್ಲಿಯ ಆಶ್ರಮದಂತೆಯೇ ಒಂದು ಸಂಸ್ಥೆಯನ್ನು ನಡೆಯಿಸಿದ್ದರು.

ಆ ಹಾಡನ್ನು ನಮ್ಮೆಲ್ಲರಿಗೂ ಕಲಿಸಿಬಿಟ್ಟಿದ್ದನು. ಪ್ರಾರ್ಥನೆಯಲ್ಲಿ ಅನೇಕ ಸಲ ಇದನ್ನು ಹಾಡುತ್ತಿದ್ದೆವು. ಇಲ್ಲಿಯ ನಮ್ಮ ಪ್ರಾರ್ಥನಾಮಾಲೆಯಲ್ಲಿ ಅದಕ್ಕೆ ಸ್ಥಾನವಿದ್ದದ್ದು ಸತ್ಯಪ್ರಿಯನಾದ ಹುಸೇನನ ಸ್ಮಾರಕವಾಗಿರುತ್ತದೆ. ಇವನಿಗಿಂತಲೂ ಹೆಚ್ಚು ಕಠಿನ ರೀತಿಯಿಂದ ಸತ್ಯವನ್ನಾಚರಿಸುವ ತರುಣರನ್ನು ನಾನು ನೋಡಿರುವುದಿಲ್ಲ. ಜೊಸಫ ರಾಯಪೆನ್ನರು ಆಶ್ರಮಕ್ಕೆ ಎಷ್ಟೋ ಸಲ ಬರುತ್ತಿದ್ದರು. ಅವರು ಕ್ರೈಸ್ತರು. ಅವರಿಗೆ 'ವೈಷ್ಣವಜನ' ಎಂಬ ಪದವು ಬಹಳ ರುಚಿಸುತ್ತಿತ್ತು. ಸಂಗೀತ ಜ್ಞಾನವಾದರೂ ಅವರಿಗೆ ಚೆನ್ನಾಗಿತ್ತು. 'ವೈಷ್ಣವಜನ' ಎಂಬಲ್ಲಿ 'ಕ್ರಿಸ್ತಿಯನ ಜನತೊ ತೇನೆ ಕಹಿಯೆ' ಎಂದು ತಲ್ಲೀನರಾಗಿ ಅವರು ಹಾಡಿದರು. ಕೂಡಲೆ ಎಲ್ಲರೂ ಅದನ್ನು ಅನುಸರಿಸಿದರು. ಜೋಸಫರ ಹರ್ಷವು ಮೇರೆ ಮೀರಿದುದನ್ನು ನಾನು ನೋಡಿದೆನು.

ಆತ್ಮಸಂತೋಷಕ್ಕಾಗಿ ನಾನು ಬೇರೆ ಬೇರೆ ಧರ್ಮಗ್ರಂಥಗಳನ್ನು ಮುಗುಚಿ ಹಾಕುತ್ತಿದ್ದಾಗ, ನನ್ನ ಮನಸ್ಸಿಗೆ ಸಮಾಧಾನವಾಗುವಷ್ಟು ಕ್ರಿಸ್ತೀ, ಇಸ್ಲಾಮು, ಜರಥುಸ್ತೀ, ಯಹುದೀ ಮತ್ತು ಹಿಂದು, ಇಷ್ಟು ಧರ್ಮಗ್ರಂಥಗಳನ್ನು ಪರಿಚಯ ಮಾಡಿಕೊಂಡೆನು. ಆ ಕಾಲಕ್ಕೆ ನನಗೆ ಎಲ್ಲ ಧರ್ಮಗಳ ವಿಷಯಕ್ಕೆ ಸಮಭಾವವಿತ್ತೆಂದು ಹೇಳಬಲ್ಲೆನು. ಆದರೆ ಆಗ ಸಮಭಾವದ ಜ್ಞಾನವು ನನಗೆ ಇದ್ದಿತೆಂದು ಹೇಳಲಾರೆನು. ಸಮಭಾವ ಶಬ್ದದ ಪೂರ್ಣ ಪರಿಚಯವು ಸಹ ಆಗ ಇದ್ದಿತೋ ಇಲ್ಲವೋ. ಆದರೆ ಅಂದಿನ ಆ ಕಾಲವನ್ನು ಸ್ಮರಣೆಗೆ ತಂದುಕೊಂಡರೆ ಆ ಧರ್ಮಗಳಿಗೆ ಹೆಸರಿಡಬೇಕೆಂಬ ಇಚ್ಛೆಯಾದದ್ದು ನನ್ನ ಲಕ್ಷದಲ್ಲಿಲ್ಲ. ಅವರ ಪುಸ್ತಕಗಳನ್ನು ಧರ್ಮದ ಪುಸ್ತಕಗಳೆಂದು ತಿಳಿದು ಆದರಪೂರ್ವಕವಾಗಿ ಓದುತಿದ್ದೆನು. ಎಲ್ಲವುಗಳಲ್ಲಿಯೂ ಮೂಲ ನೈತಿಕ ಸಿದ್ಧಾಂತವು ಒಂದೇ ಇದ್ದುದನ್ನು ನೋಡುತಿದ್ದೆನು. ಕೆಲವು ವಿಷಯಗಳು ನನಗೆ ತಿಳಿಯುತಿರಲಿಲ್ಲ. ಹಿಂದೂ ಧರ್ಮಗ್ರಂಥಗಳ ವಿಷಯವಾಗಿಯೂ ಇದೇ ರೀತಿ. ಈ ಹೊತ್ತಿಗೂ ಎಷ್ಟೋ ನನಗೆ ತಿಳಿಯುವದಿಲ್ಲ. 'ಯಾವುದನ್ನು ತಿಳಿಯಲಾರೆವೋ ಅದು ತಪ್ಪೇ ಇರುತ್ತದೆ' ಎಂದು ತಿಳಿಯುವುದು, ದೋಷವಾಗುತ್ತದೆಂದು ನನ್ನ ಅನುಭವವು. ಮೊದಲು ತಿಳಿಯದೆ ಇದ್ದ ಕೆಲವು ವಿಷಯಗಳು ಮುಂದೆ ಮುಂದೆ ಪ್ರದೀಪದಂತೆ ಸ್ಪಷ್ಟವಾಗಿ ಕಾಣಿಸುತ್ತವೆ.

ಸಮಭಾವವನ್ನಿಡುವುದರಿಂದ ಎಷ್ಟೋ ತೊಡಕುಗಳು ತಮ್ಮಷ್ಟಕ್ಕೆ ತಾವೇ ಬಿಟ್ಟು ಹೋಗುತ್ತವೆ. ಇಷ್ಟಾಗಿಯೂ ನಮಗೆ ದೋಷಗಳಿದ್ದುದು ಕಂಡು ಬಂದಲ್ಲಿ ಅದನ್ನು ತೋರಿಸಿ ಕೊಡುವಾಗ ಸಮಭಾವದಿಂದ ನಮ್ಮಲ್ಲಿ ವಿನಯವೂ, ವಿವೇಕವೂ ಉಂಟಾಗಿರುವುದರಿಂದ ಯಾರ ಮನಸ್ಸೂ ನೋಯುವುದಿಲ್ಲ.

**ಒಂದು ವೇಳೆ ಯಾವುದಾದರೊಂದು ತೊಡಕು ಉಳಿಯಬಹುದು.** ಧರ್ಮ ಮತ್ತು ಅಧರ್ಮಗಳಲ್ಲಿಯ ಭೇದವು ಉಳಿಯುತ್ತದೆಂದೂ ಅಧರ್ಮದ ಬಗ್ಗೆ ಸಮಭಾವವನ್ನು ತೋರಿಸುವದು ನಮ್ಮ ಉದ್ದೇಶವಲ್ಲವೆಂದೂ ಹೋದಸಲ ನಾನು ತಿಳಿಸಿರುವೆನು. ಹಾಗಾದರೆ ಧರ್ಮಾಧರ್ಮದ ನಿರ್ಣಯವಾಗುತ್ತಲೆ ಸಮಭಾವದ ಸಂಕಲೆಯು ಹರಿದು ಹೋಗುವುದಿಲ್ಲವೇ? ಎಂಬ ಪ್ರಶ್ನೆಯು ಹುಟ್ಟಬಹುದು. ಹೀಗೆ ಧರ್ಮಾಧರ್ಮದ ನಿರ್ಣಯ ಮಾಡುವವರು ತಪ್ಪನ್ನೂ ಮಾಡುವುದು ಶಕ್ಯವಿದೆ. ನಾವು ನಿಜವಾಗಿಯೂ ಅಹಿಂಸಾವ್ರತಿಗಳಾಗಿದ್ದರೆ ವೈರಭಾವದಿಂದ ಪಾರಾಗುತ್ತೇವೆ. ಏಕೆಂದರೆ ಅಧರ್ಮವನ್ನು ನೋಡುತ್ತಿದ್ದರೂ ಅಧರ್ಮವನ್ನಾಚರಿಸುವವನ ವಿಷಯಕ್ಕೆ ಪ್ರೇಮಭಾವವು ಇದ್ದೇ ಇರುವುದು. ಇದರಿಂದ ಅವನು ನಮ್ಮ ದೃಷ್ಟಿಯನ್ನಾದರೂ ಸ್ವೀಕಾರ ಮಾಡುವನು. ಇಲ್ಲವೆ ನಮ್ಮ ದೋಷವನ್ನಾದರೂ ನಮಗೆ ತೋರಿಸಿ ಕೊಡುವನು. ಅಥವಾ ಇಬ್ಬರೂ ಒಬ್ಬರಿಗೊಬ್ಬರ ಮತಭೇದವನ್ನು ಸಹನ ಮಾಡುವೆವು. ಎದುರಾಳಿಯು ಅಹಿಂಸಕನಿಲ್ಲದಿದ್ದರೆ ಕೊನೆಗೆ ಅವನು ಕಠೋರತೆಯನ್ನು ಉಪಯೋಗಿಸುವನು. ನಾವು ಅಹಿಂಸೆಯ ನಿಜವಾದ ಪೂಜಾರಿಗಳಾಗಿದ್ದರೆ ನಮ್ಮ ಮೃದುತ್ವವು ಅವನ ಕಠೋರತ್ವವನ್ನು ತೆಗೆದು ಹಾಕುವುದರಲ್ಲಿ ಸಂಶಯವಿಲ್ಲ. ಯಾವನಾದರೂ ತಪ್ಪು ಮಾಡಿದರೆ ಅವನಿಗೆ ನಾವು ತೊಂದರೆ ಕೊಡತಕ್ಕದ್ದಲ್ಲ. ನಾವೇ ತೊಂದರೆಯನ್ನು ಸಹನ ಮಾಡತಕ್ಕದ್ದಿರುತ್ತದೆ. ಈ ಸುವರ್ಣ ನಿಯಮಕ್ಕನುಸರಿಸಿ ನಡೆಯುವವರು ಎಲ್ಲ ಸಂಕಟಗಳೊಳಗಿಂದಲೂ ಪಾರಾಗುತ್ತಾರೆ.

---

# ೧೨ ನಮ್ರತೆ

೭-೧೦-೩೦

ಮಂಗಲ ಪ್ರಭಾತ

ಇದಕ್ಕೆ ವ್ರತಗಳಲ್ಲಿ ಬೇರೆ ಸ್ಥಾನವಿಲ್ಲ; ಇರಲೂ ಆಗದು. ಅಹಿಂಸೆಯದೇ ಇದೊಂದು ಅರ್ಥವೆಂದೋ ಅಥವಾ ಅದರಲ್ಲಿಯೇ ಸಮಾವೇಶವಾಗುತ್ತದೆಂದೋ ಹೇಳಬಹುದು. ನಮ್ರತೆಯು ಅಭ್ಯಾಸದಿಂದ ಬರುವುದಿಲ್ಲ. ಅದು ಸ್ವಭಾವದಲ್ಲಿಯೇ ಬಂದು ಹೋಗಬೇಕು. ಆಶ್ರಮ ನಿಯಮಾವಲಿಯನ್ನು ಮೊದಲು ಅನುಗೊಳಿಸಿದಾಗ, ಮಿತ್ರವರ್ಗದಲ್ಲಿ ಅದರ ಹೊಳವನ್ನು ಕಳುಹಿಸಲಾಗಿತ್ತು. ಸರ್ ಗುರುದಾಸ ಬ್ಯಾನರ್ಜಿಯವರು ನಮ್ರತೆಗೆ ವ್ರತಗಳಲ್ಲಿ ಸ್ಥಾನ ಕೊಡಬೇಕೆಂದು ಸೂಚನೆಯನ್ನು ಮಾಡಿದ್ದರು. ಆಗಲೂ ಇಲ್ಲಿ ಈ ಮೊದಲು ಹೇಳಿದ ಕಾರಣವನ್ನೇ ತೋರಿಸಲಾಗಿದ್ದಿತು. ಅದಕ್ಕೆ ವ್ರತಗಳಲ್ಲಿ ಸ್ಥಾನವಿಲ್ಲದಿದ್ದರೂ ಅದು ವ್ರತಗಳಿಗಿಂತ ಹೆಚ್ಚು ಅವಶ್ಯವಿದೆ. ಅವಶ್ಯವೇನೋ ಇದೆ; ಆದರೆ ನಮ್ರತೆಯು ಅಭ್ಯಾಸದಿಂದ ಯಾರಿಗಾದರೂ ಬಂದಿದೆ ಎಂದು ಗೊತ್ತಾಗಿಲ್ಲ. ಸತ್ಯದ ಅಭ್ಯಾಸ ಮಾಡಬಹುದು, ದಯೆಯ ಅಭ್ಯಾಸ ಮಾಡಬಹುದು, ನಮ್ರತೆಯ ಅಭ್ಯಾಸ ಮಾಡುವುದೆಂದರೆ ದಂಭದ ಅಭ್ಯಾಸ ಮಾಡುವುದೆಂದೇ ಹೇಳಬಹುದು. ಇಲ್ಲಿ ನಮ್ರತೆಯೆಂದರೆ ಪ್ರತಿಷ್ಠಿತ ಜನರಲ್ಲಿ ಒಬ್ಬರಿಗೊಬ್ಬರ ಮಾನಾರ್ಥವಾಗಿ ಉಪಯೋಗಿಸಲ್ಪಡುವ ವಿಷಯವಲ್ಲ. ಒಬ್ಬನು ಮತ್ತೊಬ್ಬನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರೂ ಅವನ ವಿಷಯಕ್ಕೆ ಹೊಟ್ಟೆಯಲ್ಲಿ ತಿರಸ್ಕಾರವು ತುಂಬಿರಬಹುದು. ಇದು ನಮ್ರತೆಯಲ್ಲ. ಠಕ್ಕತನವು. ಯಾವನೊಬ್ಬನು ರಾಮನಾಮದ ಜಪ ಮಾಡುತ್ತಲೇ ಇರಲಿ, ಜಪಮಾಲೆಯನ್ನು ತಿರುಗಿಸುತ್ತಲೇ ಇರಲಿ, ಋಷಿಯಂತೆ ಆಗಿ ಸಮಾಜದಲ್ಲಿ ಕುಳಿತಿರಲಿ; ಅವನ ತಲೆಯಲ್ಲಿ ಸ್ವಾರ್ಥವು ತುಂಬಿಕೊಂಡಿದ್ದರೆ ಅವನು ನಮ್ರನಲ್ಲ; ಪಾಖಂಡಿಯು. ನಮ್ರ ಮನುಷ್ಯನಿಗೆ ತಾನು ಯಾವಾಗ ನಮ್ರನಿರುತ್ತೇನೆಂಬುದು ತಿಳಿಯುವುದಿಲ್ಲ. ಸತ್ಯಾದಿಗಳ ಅಳತೆಯನ್ನು ನಮ್ಮ ಹತ್ತರ ಇಟ್ಟುಕೊಳ್ಳಬಹುದು. ಆದರೆ

ನಮ್ರತೆಗೆ ಅಳತೆ ಇರುವುದಿಲ್ಲ. ಸಹಜವಾದ ನಮ್ರತೆಯು ಮುಚ್ಚು ಮರೆಯಾಗಿರುವದಿಲ್ಲ; ಆದರೂ ಅದನ್ನು ನಮ್ರ ಮನುಷ್ಯನು ಸ್ವತಃ ನೋಡಲಾರನು. ವಶಿಷ್ಠ ವಿಶ್ವಾಮಿತ್ರರ ಕಥೆಗಳನ್ನು ನಾವು ಆಶ್ರಮದಲ್ಲಿ ಎಷ್ಟೋ ಸಾರೆ ತಿಳಿದುಕೊಂಡಿದ್ದೇವೆ. ನಮ್ಮ ನಮ್ರತೆಯು ಶೂನ್ಯತೆಯ ವರೆಗೆ ಹೋಗಿ ಮುಟ್ಟತಕ್ಕದ್ದು. ನಾವು ಏನಾದರೂ ಇದ್ದೇವೆಂಬ ಭೂತವು ತಲೆಯಲ್ಲಿ ಸೇರಿತೆಂದರೆ ನಮ್ಮಲ್ಲಿಯ ನಮ್ರತೆಯು ಹಾರಿಹೋಗಿ ನಮ್ಮ ಎಲ್ಲ ವ್ರತಗಳು ನಿರರ್ಥಕವಾಗುತ್ತವೆ. ವ್ರತಗಳ ಪಾಲನೆ ಮಾಡು ವವನು ಮನಸ್ಸಿನಲ್ಲಿ ತನ್ನ ವ್ರತಾಚರಣೆಯ ಬಗ್ಗೆ ಗರ್ವವನ್ನು ತಾಳಿದರೆ, ಅವನು ವ್ರತಗಳ ಬೆಲೆಯನ್ನು ಕಳೆಯುವನಷ್ಟೇ ಅಲ್ಲ; ಸಮಾಜದಲ್ಲಿ ವಿಷರೂಪಿಯಾಗಿ ಬಿಡುವನು. ಅವನ ವ್ರತದ ಬೆಲೆಯನ್ನು ಸಮಾಜವೂ ಕಟ್ಟಲಾರದು; ಅವನೂ ಅದರ ಫಲವನ್ನು ಭೋಗಿಸಲಾರನು. ನಮ್ರತೆ ಯೆಂದರೆ ಅಹಂಭಾವದ ಆತ್ಯಂತಿಕ ಕ್ಷಯವು. ವಿಚಾರ ಮಾಡಿದರೆ ಈ ಜಗತ್ತಿನಲ್ಲಿ ಜೀವಕ್ಕೆ ಧೂಲಿಯ ಕಣದಷ್ಟು ಯೋಗ್ಯತೆಯಿಲ್ಲವೆಂಬುದು ಗೊತ್ತಾಗುವುದು. ನಾವು ಶರೀರರೂಪದಲ್ಲಿ ಕ್ಷಣಜೀವಿಗಳಿದ್ದೇವೆ. ಈ ಅನಂತವಾದ ಕಾಲಚಕ್ರದಲ್ಲಿ ನೂರು ವರ್ಷಗಳ ಪ್ರಮಾಣವನ್ನು ತೆಗೆಯ ಲಿಕ್ಕೆ ಬರುವುದಿಲ್ಲ. ಆದರೆ ಈ ಕಾಲಚಕ್ರದೊಳಗಿಂದ ಪಾರಾದರೆ–ಅಂದರೆ ಏನೂ ಆಗದಿದ್ದರೆ ಎಲ್ಲವೂ ಆಗುವೆವು. ಏನಾದರೂ ಆಗುವು ದೆಂದರೆ ಈಶ್ವರನಿಂದ–ಪರಮಾತ್ಮನಿಂದ, ಸತ್ಯದಿಂದ ಬೇರೆಯಾಗುವುದು. ಏನೂ ಆಗಬಾರದೆಂದರೆ, ಪರಮಾತ್ಮನಲ್ಲಿಯೇ ಕೂಡಿಹೋಗುವುದು. ಸಮುದ್ರದಲ್ಲಿದ್ದ ಒಂದು ನೀರಿನ ಹನಿಯು ಸಮುದ್ರದ ಮಹತಿಯನ್ನು ಭೋಗಿಸುತ್ತದೆ. ಆದರೆ ಅದಕ್ಕೆ ಅದರ ಜ್ಞಾನವಿರುವುದಿಲ್ಲ. ಅದು ಸಮುದ್ರದಿಂದ ಬೇರೆಯಾಗಿ ತನ್ನ ಸ್ವಂತ ಅಸ್ತಿತ್ವದ ಹಕ್ಕನ್ನು ಸಿದ್ಧಮಾಡ ಹೋದರೆ ಆ ಕ್ಷಣವೇ ಅದು ಒಣಗಿ ಹೋಗುವುದು. ಜೀವಕ್ಕೆ ನೀರು ಗುಳ್ಳೆಯ ಉಪಮೆಯನ್ನು ಕೊಟ್ಟುದರಲ್ಲಿ ನನಗೆ ಎಳ್ಳಷ್ಟು ಅತಿಶಯೋಕ್ತಿ ಕಾಣಿಸುವುದಿಲ್ಲ. ಇಂತಹ ನಮ್ರತೆಯು ಶೂನ್ಯತೆಯ ಅಭ್ಯಾಸದಿಂದ ಹೇಗೆ ಬರಬೇಕು ? ವ್ರತಗಳನ್ನು ಯೋಗ್ಯ ರೀತಿಯಿಂದ ತಿಳಿದುಕೊಳ್ಳುವುದ ರಿಂದ ನಮ್ರತೆಯು ತನ್ನಷ್ಟಕ್ಕೆ ತಾನೇ ಬರುತ್ತ ಹೋಗುತ್ತದೆ. ಸತ್ಯದ ಪಾಲನೆಯನ್ನು ಮಾಡಲಿಚ್ಛಿಸುವವನು ಅಹಂಕಾರಿಯು ಹೇಗಾದಾನು ? ಎರಡನೆಯವರ ಸಲುವಾಗಿ ಪ್ರಾಣಕೊಡಲಿಕ್ಕೆ ಸಿದ್ಧನಾದವನು ತನ್ನ

ಸಲುವಾಗಿ ಸ್ಥಳವನ್ನು ಹೇಗೆ ಕಾದಿಟ್ಟಾನು? ಅವನು ಎರಡನೆಯುವರ ಸಲುವಾಗಿ ಪ್ರಾಣಕೊಡಲು ಸಿದ್ಧನಾದಾಗ ತನ್ನ ಸ್ವಂತ ದೇಹವನ್ನು ಬಿಸುಟೇ ಇರುವನು. ನಮ್ರತೆಯೆಂದರೆ ಪುರುಷಾರ್ಥರಾಹಿತ್ಯವಲ್ಲವೇ? ಹಿಂದೂ ಧರ್ಮದಲ್ಲಿ ಈ ಅರ್ಥವನ್ನು ಮಾಡಿ ಬಿಟ್ಟಿರುವುದೇನೋ ನಿಜ. ಅದರಿಂದ ಆಲಸ್ಯಕ್ಕೂ ಪಾಖಂಡತನಕ್ಕೂ ಅನೇಕ ಸ್ಥಳಗಳಲ್ಲಿ ಆಸರೆ ದೊರೆತಿದೆ. ನಿಜವಾಗಿ ನೋಡಲು ನಮ್ರತೆಯೆಂದರೆ ತೀವ್ರತಮವಾದ ಪುರುಷಾರ್ಥವು. ಅದೆಲ್ಲವೂ ಪರಮಾರ್ಥಕ್ಕಾಗಿಯೇ ಇರುವದು. ಈಶ್ವರನು ಸ್ವತಃ ಇಪ್ಪತ್ತುನಾಲ್ಕು ತಾಸು ಒಂದೇ ಶ್ವಾಸೋಚ್ಛ್ವಾಸದಿಂದ ಕೆಲಸವನ್ನು ಮಾಡುತ್ತಲೇ ಇರುತ್ತಾನೆ. ಆಲಸ್ಯವನ್ನು ಕಳೆದುಕೊಳ್ಳುವಷ್ಟು ಸಹ ವಿಶ್ರಾಂತಿಯನ್ನು ತೆಗೆದುಕೊಳ್ಳುವುದಿಲ್ಲ. ಅವನಂತೆ ನಾವೂ ಆಗಿಬಿಡುವಾ. ಅವನಲ್ಲಿಯೇ ಕೂಡಿ ಹೋಗುವಾ. ಅಂದರೆ ನಮ್ಮ ಕರ್ಮವು ಅವನಂತೆಯೇ ಅತಂದ್ರಿತವಾಗಿ ಬಿಡುವುದು. ಆಗಲೇಬೇಕು. ಸಮುದ್ರದಿಂದ ಬೇರೆಯಾದ ಬಿಂದುವಿನ ಬಗ್ಗೆ ನಾವು ವಿಶ್ರಾಂತಿಯ ಕಲ್ಪನೆಯನ್ನು ಮಾಡಬಲ್ಲೆವು. ಸಮುದ್ರದಲ್ಲಿರುವ ಬಿಂದುವಿಗೆ ವಿಶ್ರಾಂತಿಯೆಲ್ಲಿಯದು? ಸಮುದ್ರಕ್ಕೆ ಒಂದು ಕ್ಷಣವಾದರೂ ವಿಶ್ರಾಂತಿ ಎಲ್ಲಿದೆ? ನಮ್ಮ ರೀತಿಯೂ ಹೀಗೇ. ಈಶ್ವರರೂಪಿಯಾದ ಸಮುದ್ರದಲ್ಲಿ ನಾವು ಕೂಡಿ ಹೋದೆವೆಂದರೆ ನಮ್ಮ ವಿಶ್ರಾಂತಿಯು ಹೋಯಿತು. ವಿಶ್ರಾಂತಿಯ ಆವಶ್ಯಕತೆಯೂ ಹೋಯಿತು. ಇದೇ ನಿಜವಾದ ವಿಶ್ರಾಂತಿಯು. ಈ ಮಹಾ ಅಶಾಂತಿಯಲ್ಲಿಯೇ ಶಾಂತಿಯು. ಆದುದರಿಂದ ನಿಜವಾದ ನಮ್ರತೆಯು ನಮ್ಮ ಹತ್ತಿರ ಪ್ರಾಣಿಮಾತ್ರಗಳ ಸೇವೆಗಾಗಿ ಸರ್ವಾರ್ಪಣವನ್ನು ಬಯಸುತ್ತದೆ. ಎಲ್ಲ ನೀಗಿ ನಿಂತ ಮೇಲೆ ನಮ್ಮ ಹತ್ತಿರ ಸೋಮವಾರ, ಮಂಗಳವಾರ, ಅಥವಾ ಶನಿವಾರಗಳು ಉಳಿಯುವುದಿಲ್ಲ. ಈ ಸ್ಥಿತಿಯ ವರ್ಣನೆ ಮಾಡುವುದು ಕಠಿನವಿದೆ. ಆದರೆ ಅನುಭವಗಮ್ಯವಿದೆ. ಸರ್ವಾರ್ಪಣವನ್ನು ಮಾಡಿರುವವರು ಅದನ್ನು ಅನುಭವಿಸಿದ್ದಾರೆ. ನಮ್ಮೆಲ್ಲರಿಗೂ ಅನುಭವಿಸಲಿಕ್ಕೆ ಬರುವಂತಿದೆ. ಇದನ್ನು ಅನುಭವಿಸುವ ಉದ್ದೇಶದಿಂದಲೇ ನಾವೆಲ್ಲರೂ ಆಶ್ರಮದಲ್ಲಿ ಕೂಡಿದ್ದೇವೆ. ಎಲ್ಲ ವ್ರತಗಳೂ ಎಲ್ಲ ಪ್ರವೃತ್ತಿಗಳೂ ಅನುಭವಿಸುವ ಉದ್ದೇಶದಿಂದಲೇ ಇರುವವು. ಮತ್ತೆ ಮತ್ತೆ ಮಾಡುತ್ತ ಹೋದಲ್ಲಿ ಇದು ಎಂದಾದರೊಂದು ದಿನ ನಮ್ಮ ಕೈವಶವಾಗುವುದು. ಇದನ್ನೇ ಹುಡುಕಲಿಕ್ಕೆ ಹೋದರೆ ಪ್ರಾಪ್ತವಾಗಲಾರದು.

## ೧೩ ಸ್ವದೇಶಿ

ಪ್ರವಚನಗಳಲ್ಲಿ ಸ್ವದೇಶಿಯ ಬಗ್ಗೆ ಬರೆಯುವದನ್ನು ಬಿಟ್ಟೇ ಬಿಡುವೆನು. ರಾಜಕಾರಣಕ್ಕೆ ಸಂಬಂಧಿಸಿದ ವಿಷಯಗಳನ್ನು ಬಿಡುವ ಸಂಕಲ್ಪವಿರುವುದರಿಂದ ಅದರಲ್ಲಿ ಸ್ವಲ್ಪ ಕೊರತೆಯುಂಟಾಗುತ್ತದೆಂದು ಅನಿಸುತ್ತದೆ. ‘ ಸ್ವದೇಶಿ ’ ವಿಷಯವನ್ನು ಕೇವಲ ಧಾರ್ಮಿಕ ದೃಷ್ಟಿಯಿಂದ ಬರೆಯುವಾಗಲೂ– ಅಪ್ರತ್ಯಕ್ಷ ರೀತಿಯಿಂದಾದರೂ– ರಾಜಕಾರಣಕ್ಕೆ ಸಂಬಂಧಿಸಿದ ಎಷ್ಟೋ ವಿಷಯಗಳನ್ನು ಬರೆಯಬೇಕಾಗುತ್ತದೆ.

---

## ೧೪ ಸ್ವದೇಶಿ ವ್ರತವು

ಮಂಗಲ ಪ್ರಭಾತ

ಸ್ವದೇಶಿ ವ್ರತವು ಈ ಯುಗದ ಮಹಾವ್ರತವು. ವಿಷಯಗಳು ಆತ್ಮದ ಧರ್ಮವಾಗಿದ್ದರೂ ಅಜ್ಞಾನದಿಂದಾಗಲಿ, ಬೇರೆ ಯಾವುದೇ ಕಾರಣದಿಂದಾಗಲಿ, ಆತ್ಮಕ್ಕೆ ಅದರ ಸ್ಮೃತಿಯು ಉಳಿಯುವುದಿಲ್ಲವಾದ್ದರಿಂದ ಅದರ ಪಾಲನೆಗಾಗಿ ವ್ರತವನ್ನು ತೆಗೆದುಕೊಳ್ಳುವುದು ಅವಶ್ಯವಿರುತ್ತದೆ. ಸ್ವಾಭಾವಿಕವಾಗಿ ಮಾಂಸಾಹಾರಿಯಲ್ಲದವನು ಮಾಂಸಾಹಾರ ಮಾಡಬಾರದೆಂಬ ವ್ರತವನ್ನು ತೆಗೆದುಕೊಳ್ಳುವ ಆವಶ್ಯಕತೆಯಿಲ್ಲ. ಅವನಿಗೆ ಮಾಂಸದ ಅಪೇಕ್ಷೆಯೇ ಇರುವುದಿಲ್ಲ. ಇಷ್ಟೇ ಅಲ್ಲ, ಮಾಂಸವನ್ನು ನೋಡಿದ ಕೂಡಲೆ ಅವನಿಗೆ ಓಕರಿಕೆ ಬರುವುದು.

ಸ್ವದೇಶಿಯು ಆತ್ಮದ ಧರ್ಮವಿದ್ದರೂ ಅದು ಅದನ್ನು ಮರೆತು ಬಿಟ್ಟಿರುವದರಿಂದ ಅದಕ್ಕಾಗಿ ವ್ರತವನ್ನು ತೆಗೆದುಕೊಳ್ಳುವುದು ಅವಶ್ಯವಿರುತ್ತದೆ. ಆತ್ಮದ ಸಲುವಾಗಿ ಸ್ವದೇಶಿಯ ಪರಾಕಾಷ್ಟೆಯೆಂದರೆ ಸ್ಥೂಲ ಸಂಬಂಧಮಾತ್ರಗಳಿಂದ ಆತ್ಯಂತಿಕ ಮುಕ್ತಿಯು. ಆತ್ಮಕ್ಕೆ ದೇಹವೂ ವಿದೇಶಿಯೇ. ಯಾಕಂದರೆ ಬೇರೆ ಆತ್ಮಗಳೊಂದಿಗೆ ಬೆರೆಯುವಾಗ

---

* ಪ್ರಸ್ತಾವನೆಯನ್ನು ನೋಡಿರಿ

ದೇಹವು ಅದನ್ನು ತಡೆಯುತ್ತದೆ. ಆತ್ಮದ ದಾರಿಯಲ್ಲಿ ಇದೊಂದು ಕಂಟಕ. ಜೀವಮಾತ್ರಗಳ ಜೊತೆಗೆ ಬೆರೆಯುವಾಗ ಸ್ವದೇಶಿ ಧರ್ಮವನ್ನು ತಿಳಿದವನೂ ಅದನ್ನು ಪಾಲಿಸುವವನೂ ದೇಹದ ತ್ಯಾಗವನ್ನು ಸಹ ಮಾಡುತ್ತಾನೆ.

ಈ ಅರ್ಥವು ನಿಜವಾಗಿದ್ದರೆ ನಮ್ಮ ಹತ್ತಿರ ಇದ್ದವರ ಸೇವೆಯಲ್ಲಿ ನಾವು ಪೂರ್ಣ ಮಗ್ನರಾಗುವುದೇ ಸ್ವದೇಶಿ ಧರ್ಮವೆಂದು ನಮಗೆ ಸಹಜ ವಾಗಿ ತಿಳಿಯುವುದು. ಈ ಸೇವೆಯನ್ನು ಮಾಡುವಾಗ ದೂರದಲ್ಲಿದ್ದವರು ಉಳಿದು ಹೋಗುತ್ತಾರೆ, ಅಥವಾ ಇದರಿಂದ ಅವರಿಗೆ ಹಾನಿತಟ್ಟುತ್ತದೆ ಎಂಬ ಭ್ರಾಂತಿಯುಂಟಾಗುವ ಸಂಭವವಿರುತ್ತದೆ. ಆದರೆ ಅದು ಭ್ರಾಂತಿ ಯಾಗಿಯೇ ಇರಬಹುದು. ಸ್ವದೇಶದ ಶುದ್ಧ ಸೇವೆಯನ್ನು ಮಾಡುತ್ತಿರು ವಾಗ ಪರದೇಶದ್ದು ಸಹ ಶುದ್ಧ ಸೇವೆಯೂ ಆಗಿಯೆ ಆಗುತ್ತದೆ. ಪಿಂಡ ದಲ್ಲಿದ್ದುದೇ ಬ್ರಹ್ಮಾಂಡದಲ್ಲಿಯಲ್ಲವೇ ?

ಇದಕ್ಕೆ ವಿರುದ್ಧವಾಗಿ ದೂರದಲ್ಲಿದ್ದವರ ಸೇವೆಯನ್ನು ಮಾಡುವ ಮೋಹವನ್ನು ತಾಳಿದರೆ ಅದೂ ಆಗುವದಿಲ್ಲ, ನೆರೆಯವರ ಸೇವೆಯೂ ಉಳಿದು ಹೋಗುತ್ತದೆ. ಹೀಗೆ ಅತೋಭ್ರಷ್ಟಸ್ತತೋಭ್ರಷ್ಟರಾಗುತ್ತೇವೆ. ನನ್ನನ್ನೇ ಅವಲಂಬಿಸಿದ್ದ ಕುಟುಂಬದ ಜನರನ್ನೇ ಆಗಲಿ, ಗ್ರಾಮವಾಸಿ ಗಳನ್ನೇ ಆಗಲಿ ನಾನು ಬಿಟ್ಟೇನೆಂದರೆ ನನ್ನ ಮೇಲಿದ್ದ ಅವರ ಆಧಾರವು ಹೋಯಿತು. ದೂರದಲ್ಲಿದ್ದವರ ಸೇವೆಯನ್ನು ಮಾಡಹೋದರೆ ಅಲ್ಲಿದ್ದವರು, ಅಲ್ಲಿಯ ಜನರ ಸೇವೆ ಮಾಡುವದು ತಮ್ಮ ಧರ್ಮವಾಗಿದ್ದರೂ ಅದನ್ನು ಮರೆತು ಬಿಡುತ್ತಾರೆ. ದೂರದಲ್ಲಿದ್ದವರಿಗೆ, ಸೇವೆಯನ್ನು ಮಾಡುವ ಬದಲು ಇಲ್ಲದ ಸಲುಗೆಯನ್ನು ತೋರಿಸಿ, ಅಲ್ಲಿಯ ಜನರನ್ನು ಅಲಸಿಗರನ್ನು ಮಾಡಿದಂತಾಗುವುದು. ಹೀಗೆ ಮಾಡುವುದೆಂದರೆ ಅಲ್ಲಿಯ ವಾತಾವರಣ ವನ್ನು ಕೆಡಿಸಿದಂತಾಗುವುದು. ತನ್ನದನ್ನೂ ಕೆಡಿಸಿಕೊಂಡೇ ಹೋಗಿರುವನು. ಹೀಗೆ ಪ್ರತಿಯೊಂದು ರೀತಿಯಿಂದ ಅವನು ಹಾನಿಯನ್ನೇ ಮಾಡುವನು. ಇಂತಹ ಅಸಂಖ್ಯ ಗಣಿತಗಳನ್ನು ಕಲ್ಪಿಸಿ ಸ್ವದೇಶಿ ಧರ್ಮವನ್ನು ಸಿದ್ಧ ಮಾಡಬಹುದು. ಆದುದರಿಂದಲೇ 'ಸ್ವಧರ್ಮೆ ನಿಧನಂ ಶ್ರೇಯಃ ಪರಧರ್ಮೋಭಯಾವಹಃ' ಎಂಬ ವಾಕ್ಯವು ಹೊರಟಿದೆ. ಇದರ ಅರ್ಥ ವನ್ನು ಹೀಗೆ ಅವಶ್ಯವಾಗಿ ಮಾಡಬಹುದು. 'ಸ್ವದೇಶಿ' ವ್ರತವನ್ನು

ಪಾಲಿಸುವಾಗ ಮೃತ್ಯು ಬಂದರೂ ಲೇಸು. ಪರದೇಶಿಯಂತೂ ಭಯಾನಕವು. ಸ್ವಧರ್ಮವೆಂದರೆ ಸ್ವದೇಶಿ.

ಸ್ವದೇಶಿಯನ್ನು ತಿಳಿಯದಿರುವುದರಿಂದಲೇ ವಿಶೇಷ ಗೊಂದಲವಾಗುತ್ತದೆ. ಕುಟುಂಬದ ಮೇಲೆ ಮೋಹವನ್ನಿಟ್ಟು, ಅದರ ಮೇಲೆ ಸಲುಗೆಯನ್ನು ಮಾಡುವದು, ಅದಕ್ಕಾಗಿ ದುಡ್ಡು ಕದಿಯುವದು ಅಥವಾ ಬೇರೆ ದುರ್ಮಾರ್ಗಗಳನ್ನು ರಚಿಸುವದು ಸ್ವದೇಶಿಯಲ್ಲ. ನನಗಂತೂ **ಅದರ ವಿಷಯಕ್ಕೆ** ಇರುವ ನನ್ನ ಧರ್ಮವನ್ನೂ ಪಾಲಿಸುವದಿದೆ. ಆ ಧರ್ಮವನ್ನು ಹುಡುಕುವಾಗಲೂ ಪಾಲಿಸುವಾಗಲೂ ನನಗೆ ಸರ್ವವ್ಯಾಪಿಯಾದ ಧರ್ಮವು ಸಿಕ್ಕಿರುವದು. (ಸ್ವಧರ್ಮವನ್ನು ಪಾಲಿಸುವಾಗ ಪರಧರ್ಮಿಗಳಿಗಾಗಲಿ, ಪರಧರ್ಮಕ್ಕಾಗಲಿ, ಹಾನಿಯು ತಟ್ಟುವುದೇ ಇಲ್ಲ. ತಟ್ಟಲೂ ಕೂಡದು.) ಹಾಗೆ ತಟ್ಟಿದರೆ ಸ್ವಧರ್ಮವೆಂದು ಗ್ರಹಿತ ಮಾಡಿಕೊಂಡ ಧರ್ಮವು ಸ್ವಧರ್ಮವಲ್ಲ, ಅದು ಸ್ವಾಭಿಮಾನವು. ಆದುದರಿಂದಲೇ ಅದು ತ್ಯಾಜ್ಯವಿರುತ್ತದೆ.

ಸ್ವದೇಶಿಯ ಪಾಲನವನ್ನು ಮಾಡುವಾಗ ಕುಟುಂಬದ ಹೋಮವನ್ನೂ ಮಾಡಬೇಕಾಗುವುದು. ಹಾಗೆ ಮಾಡಬೇಕಾದರೂ ಅದರಲ್ಲಿಯೂ ಕುಟುಂಬದ ಸೇವೆಯು ಇರಲಿಕ್ಕೆ ಬೇಕು. ನಮ್ಮನ್ನು ಹೋಮಿಸಿಕೊಂಡು **ನಮ್ಮ ರಕ್ಷಣೆ ಮಾಡಿಕೊಳ್ಳುವಂತೆಯೇ ಕುಟುಂಬದ ಹೋಮಮಾಡಿ ಅದರ ರಕ್ಷಕರಾಗಬೇಕು.** ನಮ್ಮ ಊರಲ್ಲಿ ಮಾರಿಯ ಬೇನೆಯುಂಟಾಗಿದೆ ಎಂದು ತಿಳಿಯುವಾ. ಈ ರೋಗದಿಂದ ದುಃಖಪೀಡಿತರಾದ ಜನರ ಸೇವೆಯಲ್ಲಿ ನಾನು ನನ್ನನ್ನೂ ಹೆಂಡತಿಯನ್ನೂ ಗಂಡು ಹೆಣ್ಣುಮಕ್ಕಳನ್ನೂ ತೊಡಕಿಸುವುದರಿಂದ ನಾವೆಲ್ಲರೂ ಅದೇ ವ್ಯಾಧಿಯಲ್ಲಿ ಸಿಕ್ಕು ಮೃತ್ಯುವಿನ ಬಾಯಿಗೆ ಗುರಿಯಾದರೆ ನಾನು ಕುಟುಂಬದ ಸಂಹಾರ ಮಾಡಿದಂತಲ್ಲ, ಅವರ ಸೇವೆಯನ್ನೇ ಮಾಡುತ್ತೇನೆ. ಸ್ವದೇಶಿಯಲ್ಲಿ ಸ್ವಾರ್ಥವಿಲ್ಲ. ಇದ್ದರೂ ಶುದ್ಧ ಸ್ವಾರ್ಥವಿದೆ. ಶುದ್ಧ ಸ್ವಾರ್ಥವೆಂದರೆ ಪರಮಾರ್ಥವು, ಶುದ್ಧ ಸ್ವದೇಶಿಯೆಂದರೆ ಪರಮಾರ್ಥದ ಪರಾಕಾಷ್ಠೆಯು.

ಈ ವಿಚಾರಶ್ರೇಣಿಯ ಆಶ್ರಯದಿಂದಲೇ ನಾನು ಖಾದಿಯಲ್ಲಿ ಸಾಮಾಜಿಕವಾದ ಶುದ್ಧ ಸ್ವದೇಶಿಯ ಧರ್ಮವನ್ನು ಕಂಡೆನು. ಎಲ್ಲರಿಗೂ

ತಿಳಿಯಲಿಕ್ಕೆ ಶಕ್ಯವಿದ್ದಂತಹ, ಎಲ್ಲರೂ ಈ ಯುಗದಲ್ಲಿಯೂ ಈ ದೇಶದಲ್ಲಿಯೂ ಪಾಲಿಸುವದು ತೀರ ಆವಶ್ಯಕವಿರುವಂತಹ, ಯಾವ ಸ್ವದೇಶೀ ಧರ್ಮವಿರಬಹುದು? ಸಹಜವಾಗಿ ಪಾಲಿಸಲು ಬರುವಂತಹದೂ ಹಿಂದುಸ್ತಾನದಲ್ಲಿಯ ಕೋಟ್ಯವಧಿ ಜನರ ರಕ್ಷಣೆ ಮಾಡಬಲ್ಲಂತಹದೂ ಆದ ಯಾವ ಸ್ವದೇಶಿ ಧರ್ಮವಿರಬಹುದು? ಈ ಪ್ರಶ್ನೆಗಳಿಗೆ **ರಾಟಿ** ಅಥವಾ **ಖಾದಿ**ಯೆಂದು ಉತ್ತರ ದೊರೆಯಿತು.

ಈ ಧರ್ಮದ ಪಾಲನದಿಂದ ಪರದೇಶದ ಗಿರಣಿಯವರಿಗೆ ಹಾನಿ ತಟ್ಟುತ್ತದೆಂದು ಯಾರೂ ತಿಳಿಯಕೂಡದು. ಕಳ್ಳನು ಕದ್ದ ಒಡವೆಯನ್ನು ತಿರುಗಿ ಕೊಟ್ಟರೆ ಅಥವಾ ಕಳವು ಮಾಡುವಾಗ ಅವನನ್ನು ತಡೆದರೆ ಅವನಿಗೆ ಹಾನಿಯಲ್ಲ ಲಾಭವೇ. ನೆರೆಯವರು ಸೆರೆ ಕುಡಿಯುವುದನ್ನಾಗಲೀ, ಅಫು ತಿನ್ನುವುದನ್ನಾಗಲೀ ಬಿಡುವುದರಿಂದ ಸೆರೆಗಾರನಿಗಾಗಲಿ ಅಫುವಿನ ಗುತ್ತೇಗಾರನಿಗಾಗಲಿ, ಹಾನಿಯಲ್ಲ. ಲಾಭವೇ ಇದೆ. ಅಯೋಗ್ಯ ಮಾರ್ಗದಿಂದ ಹಣವನ್ನು ಸಂಪಾದಿಸುವವರ ಈ ಅನರ್ಥಗಳು ನಾಶವಾದರೆ ಅದರಲ್ಲಿ ಅವರದೂ ಜಗತ್ತಿನದೂ ಕಲ್ಯಾಣವೇ ಇದೆ.

ರಾಟಿಯ ಮೇಲಿಂದ ಹೇಗಾದರೂ ನೂಲು ನೂತು, ತಾವು ಸ್ವತಃ ಖಾದಿಯನ್ನು ಹಾಕಿಕೊಂಡು ಅಥವಾ ಎರಡನೆಯವರಿಗೆ ಹಾಕಿಸಿ, ಸ್ವದೇಶಿ ಧರ್ಮದ ಪೂರ್ಣ ಪಾಲನವಾಯಿತೆಂದು ತಿಳಿದುಕೊಂಡು ಕೂಡ್ರುವವರು ಮಹಾ ಮೋಹದಲ್ಲಿ ಮುಳುಗಿದ್ದಾರೆ. ಖಾದಿಯು ಸಾಮಾಜಿಕ ಸ್ವದೇಶಿಯ ಮೊದಲನೆಯ ಮೆಟ್ಟಲು. ಇದು ಸ್ವದೇಶಿ ಧರ್ಮದ ಕೊನೆಯ ಮೇರೆಯಲ್ಲ. ಖಾದಿಯೊಂದನ್ನುಳಿದು ಬೇರೆ ಎಲ್ಲ ವಿದೇಶಿಯ ವಸ್ತುಗಳನ್ನೆ ತಮ್ಮಲ್ಲಿ ತಂದು ತುಂಬುವಂತಹ ಖಾದೀಧಾರಿಗಳನ್ನು ನೋಡಿದ್ದೇನೆ. ಅವರು ಸ್ವದೇಶೀ ಪಾಲನ ಮಾಡಿದಂತಲ್ಲ. ಹರಿಯುವ ಪ್ರವಾಹದಗುಂಟ ಹರಿಯುವವರು ಅವರು. ಸ್ವದೇಶಿ ಪಾಲನ ಮಾಡುವವನು ದಿನಾಲು ತನ್ನ ನೆರೆಹೊರೆಯನ್ನು ನಿರೀಕ್ಷಿಸುತ್ತಿದ್ದು, ತನ್ನ ನೆರೆಯವರ ಸೇವೆಯನ್ನು ಮಾಡಲು ಶಕ್ಯವಿದ್ದಲ್ಲಿ ಅಂದರೆ ಅವರ ಕೈಯಿಂದ ಸಿದ್ಧವಾದ ಆವಶ್ಯಕ ವಸ್ತುವಿದ್ದರೆ, ಬೇರೆ ವಸ್ತುವನ್ನು ತ್ಯಾಗಮಾಡಿ ಅದನ್ನು ತೆಗೆದುಕೊಳ್ಳುವನು. ಮೊದಲು ಸ್ವದೇಶೀ ವಸ್ತುಗಳು ಎಷ್ಟೇ ತುಟ್ಟಿಯಾಗಿರಲಿ, ಕಡಿಮೆಪ್ರತಿಯವಾಗಿರಲಿ, ವ್ರತಧಾರಿಯು ಅದರಲ್ಲಿ

ಸುಧಾರಣೆ ಮಾಡಲಿಕ್ಕೆ ಪ್ರಯತ್ನಪಡುವನು. ಅಂಜುಗುಳಿಯಾಗಿ ಸ್ವದೇಶಿಯ ವಸ್ತುಗಳು ಕಗ್ಗವಾಗಿರುವವೆಂದು ಪರದೇಶಿ ವಸ್ತುಗಳನ್ನು ಉಪಯೋಗಿಸಲಿಕ್ಕೆ ಪ್ರಾರಂಭ ಮಾಡಲಾರನು.

ಸ್ವದೇಶಿ ಧರ್ಮವನ್ನು ತಿಳಿದವನು ಕೂಪಮಂಡೂಕದಂತೆ ತನ್ನ ಬಾವಿಯಲ್ಲಿಯೇ ತಾನು ಮುಳುಗಿ ಹೋಗಲಾರನು. ಯಾವ ವಸ್ತುವು ಸ್ವದೇಶದಲ್ಲಿ ಆಗುವದಿಲ್ಲವೋ ಅಥವಾ ಯಾವುದು ಬಹು ಪ್ರಯಾಸದಿಂದ ಸಿದ್ಧವಾಗಬಹುದೋ ಅಂತಹ ವಸ್ತುಗಳನ್ನು ಪರದೇಶದ ದ್ವೇಷದಿಂದ ತನ್ನ ದೇಶದಲ್ಲಿ ಸಿದ್ಧಪಡಿಸುತ್ತ ಕುಳಿತಲ್ಲಿ ಅದು ಸ್ವದೇಶಿ ಧರ್ಮವೆನಿಸಲಾರದು. ಸ್ವದೇಶಿ ಧರ್ಮವನ್ನಾಚರಿಸುವವನು ಪರದೇಶಿಯ ದ್ವೇಷವನ್ನು ಎಂದೂ ಮಾಡುವುದಿಲ್ಲ. ಪೂರ್ಣ ಸ್ವದೇಶಿ ಧರ್ಮದಲ್ಲಿ ಯಾರದೂ ದ್ವೇಷವಿರುವುದಿಲ್ಲ. ಇದು ಸಂಕುಚಿತ ಧರ್ಮವಲ್ಲ. ಇದು ಪ್ರೇಮದಿಂದ, ಅಹಿಂಸೆಯಿಂದ ಉತ್ಪನ್ನವಾದ ಸುಂದರ ಧರ್ಮವು.

---

## ೧೫ ವ್ರತದ ಆವಶ್ಯಕತೆಯು

೧೪-೧೦-೩೦
ಮಂಗಲ ಪ್ರಭಾತ

ವ್ರತದ ಮಹತ್ವದ ಬಗ್ಗೆ ಈ ಲೇಖಮಾಲೆಯಲ್ಲಿ ನಾನು ಏಸೋ ಸ್ವಲ್ಪ ಬರೆದಿರುವೆನು. ಆದರೆ ವ್ರತಗಳು ಜೀವನವನ್ನು ನಿಗ್ರಹ ಮಾಡಲಿಕ್ಕೆ ಅವಶ್ಯವಾಗಿರುತ್ತವೆಂಬುದರ ವಿಚಾರ ಮಾಡುವುದು ಯೋಗ್ಯವೆನಿಸುತ್ತದೆ. ವ್ರತಗಳ ಬಗ್ಗೆ ಬರೆದಿರುವೆನು. ಈಗ ಅದರ ಅವಶ್ಯಕತೆಯನ್ನು ವಿಚಾರಿಸುವಾ.

ಒಂದು ಪ್ರಬಲವಾದ ಸಂಪ್ರದಾಯವಿದೆಯೆಂದು ತಿಳಿಯುವಾ. “ಯಾವುದೊಂದು ನಿಯಮದ ಪಾಲನ ಮಾಡುವುದು ಉಚಿತವಿದೆ. ಆದರೆ ಅದಕ್ಕಾಗಿ ವ್ರತವನ್ನು ತೆಗೆದುಕೊಳ್ಳುವ ಆವಶ್ಯಕತೆಯಿಲ್ಲ. ಇಷ್ಟೇ ಅಲ್ಲ,

ಅದು ಮನಸ್ಸಿನ ಹೇಡಿತನವನ್ನು ತೋರಿಸುತ್ತದೆ. ಹಾನಿಕರವೂ ಇರುತ್ತದೆ. ಇದಲ್ಲದೆ ವ್ರತವನ್ನು ತೆಗೆದುಕೊಂಡ ಮೇಲೆ ಆ ವ್ರತವು ಕಠಿನ ಅಥವಾ ಪಾಪವೆನಿಸಿದರೂ ಅದಕ್ಕೆ ಅಂಟಿಕೊಂಡಿರಬೇಕೆಂದರೆ ಇದೇನೋ ಅಸಹ್ಯ ವಿರುತ್ತದೆ" ಎಂದು ಆ ಸಂಪ್ರದಾಯದವರ ಅಭಿಪ್ರಾಯವಿರುತ್ತದೆ ಯೆಂದು ಕಲ್ಪಿಸೋಣ! ಆ ಸಂಪ್ರದಾಯದವರು ಮುಂದೆ "ಸೆರೆ ಕುಡಿಯದೆ ಇರುವದು ಉತ್ತಮವಿರುವದರಿಂದ ಅದನ್ನು ಕುಡಿಯಬಾರದು. ಆದರೆ ಎಂದಾದರೊಮ್ಮೆ ಕುಡಿದರೆ ಏನಾಯಿತು? ಔಷಧವೆಂದೂ ಅದನ್ನು ಕುಡಿಯಬಾರದೆಂಬ ವ್ರತವು ಕೊರಳಲ್ಲಿ ಗುದ್ದಿ ಕಟ್ಟಿಕೊಂಡಂತಾಗುವುದು. ಸೆರೆಯಂತೆಯೇ ಉಳಿದವುಗಳು. ಅಸತ್ಯವನ್ನೂ ಹಿತಕ್ಕಾಗಿ ಯಾಕೆ ನುಡಿಯಬಾರದು?" ಎಂದು ಹೇಳುತ್ತಾರೆ. ನನಗೆ ಈ ಮಾತುಗಳಲ್ಲಿ ತಥ್ಯಾಂಶವು ಕಾಣುವದಿಲ್ಲ. ವ್ರತವೆಂದರೆ ಅಚಲವಾದ ನಿಶ್ಚಯವು. ತೊಂದರೆಗಳನ್ನು ಸಹಿಸುವದರ ಸಲುವಾಗಿಯೇ ವ್ರತದ ಆವಶ್ಯಕತೆಯಿದೆ. ತೊಂದರೆಗಳನ್ನು ಸಹಿಸಿದರೂ ವ್ರತವನ್ನು ಮುರಿಯದಿರುವದೇ ಅಚಲವಾದ ನಿಶ್ಚಯವೆಂದು ತಿಳಿಯಬೇಕು. ಇಂತಹ ನಿಶ್ಚಯದ ಹೊರತು ಮನುಷ್ಯನು ಉತ್ತರೋತ್ತರ ಪ್ರಗತಿಯನ್ನು ಹೊಂದಲಾರನು ಎಂದು ಇಡೀ ಜಗತ್ತಿನ ಅನುಭವವೇ ಇದಕ್ಕೆ ಸಾಕ್ಷಿಯಾಗಿದೆ. ಆದರೆ ಯಾವುದು ಪಾಪರೂಪ ವದೆಯೋ ಅದಕ್ಕಾಗಿ ನಿಶ್ಚಯ ಮಾಡುವದು, ವ್ರತವೆಂದು ಹೇಳಲಾಗದು. ಅದು ರಾಕ್ಷಸೀವೃತ್ತಿಯು. ಯಾವದಾದರೊಂದು ನಿಶ್ಚಯವು ಮೊದಲು ಪುಣ್ಯಪ್ರಡವೆಂದು ತಿಳಿದಿದ್ದು ಹಿಂದುಗಡೆ ಪಾಪಪ್ರದವೆಂದು ಗೊತ್ತಾದರೆ ಅದನ್ನು ಬಿಟ್ಟುಬಿಡುವದು ಆವಶ್ಯಕವಾದ ಧರ್ಮವು. ಇಂಥ ವಿಷಯಗಳ ಬಗ್ಗೆ ಯಾರೂ ವ್ರತವನ್ನು ತೆಗೆದುಕೊಳ್ಳುವುದಿಲ್ಲ. ತೆಗೆದುಕೊಳ್ಳಲೂ ಬಾರದು. ಸರ್ವಮಾನ್ಯ ಧರ್ಮವೆಂದು ಎನಿಸಿಕೊಳ್ಳುತ್ತಿದ್ದರೂ ಅದು ನಮ್ಮ ಆಚರಣೆಯಲ್ಲಿ ಬಾರದಿದ್ದಾಗ ನಮಗೆ ಆ ವ್ರತದ ಆವಶ್ಯಕತೆ ಯಿರುತ್ತದೆ. ಮೇಲಿನ ಉದಾಹರಣೆಯಲ್ಲಿ ಪಾಪದ ಆಭಾಸ ಮಾತ್ರವಿದೆ. ಸತ್ಯ ನುಡಿಯುವದರಿಂದ ಯಾರಿಗಾದರೂ ಹಾನಿಯಾದರೆ? ಎಂದು ಮೊದ ಲಾದ ವಿಚಾರಗಳನ್ನು ಸತ್ಯವಾದಿಯು ಮಾಡುತ್ತ ಕುಳಿತುಕೊಳ್ಳಬಾರದು. ಸತ್ಯದಿಂದ ಈ ಜಗತ್ತಿನಲ್ಲಿ ಯಾರಿಗೂ ಹಾನಿಯಾಗಿಲ್ಲ. ಮುಂದೆಯೂ ಆಗುವದಿಲ್ಲವೆಂದು ಅವನು ವಿಶ್ವಾಸವನ್ನು ತಾಳಬೇಕು. ಶರೀರದ ಹೊಣೆಗಾರಿಕೆಯನ್ನು ಹೊರುವ ನಿಶ್ಚಯವು ವ್ರತದ

ಹಿಂದೆ ಇದ್ದೇ ಇರುತ್ತದೆ; ಔಷಧವೆಂದೂ ಸೆರೆ ಕುಡಿಯದೆ ಇರುವುದರಿಂದ ದೇಹವು ಅಳಿದರೇನಾಯಿತು ? ಸೆರೆಯನ್ನು ಕುಡಿಯುವುದರಿಂದ ದೇಹವು ಉಳಿಯುವುದು ಎಂದು ಯಾರು ತಾಮ್ರಪಟವನ್ನು ಬರೆದು ಕೊಡಬಲ್ಲರು? ಮತ್ತು ಆ ಹೊತ್ತಿಗೆ ದೇಹವು ಉಳಿದರೂ ಮತ್ತೊಂದು ಕ್ಷಣಕ್ಕೆ ಬೇರೊಂದು ಕಾರಣದಿಂದ ಅದು ನಾಶವಾದರೆ, ಅದರ ಹೊಣೆಗಾರಿಕೆಯು ಯಾರ ಮೇಲೆ ? (ಇದಕ್ಕೆ ವಿಪರೀತವಾಗಿ ದೇಹವು ಹೋಗುತ್ತಿದ್ದರೂ ಸೆರೆಯನ್ನು ತೆಗೆದುಕೊಳ್ಳದಿರುವ ಉದಾಹರಣೆಯ ಚಮತ್ಕಾರವಾದ ಪರಿಣಾಮವು ಮದ್ಯಪಾನದ ಬಲೆಯಲ್ಲಿ ಸಿಕ್ಕುಬಿದ್ದ ಮನುಷ್ಯರ ಮೇಲೆ ಆಗುವದು. ಬಹಳವಾಗಿ ಇದರಿಂದ ಜಗತ್ತಿಗೆ ಎಷ್ಟು ಉಪಕಾರವಿದೆ!) ದೇಹವು ಅಳಿಯಲಿ, ಉಳಿಯಲಿ, ನನಗಂತೂ ನನ್ನ ಧರ್ಮವನ್ನು ಪಾಲಿಸುವುದಿದೆ ಎಂಬ ಭವ್ಯವಾದ ನಿಶ್ಚಯ ಮಾಡುವವನಿಗೇ ಒಂದಿಲ್ಲೊಂದು ದಿವಸ ಈಶ್ವರನ ದರ್ಶನವಾಗಬಲ್ಲದು. ವ್ರತವನ್ನಾಚರಿಸುವುದು, ಹೇಡಿಯ ಲಕ್ಷಣವಲ್ಲ, ಶೂರನ ಲಕ್ಷಣವು. ಯಾವುದಾದರೊಂದನ್ನು ಮಾಡುವುದು ಉಚಿತವಿದೆ ಎಂದೆನಿಸಿದರೆ ಅದನ್ನು ಮಾಡಲಿಕ್ಕೆಬೇಕು. ಇದರ ಹೆಸರೇ ವ್ರತವು. ಇದರಲ್ಲಿ ಶಕ್ತಿಯಿದೆ. ಆ ಮೇಲೆ ಇದಕ್ಕೆ ವ್ರತವೆಂದು ಕರೆಯದೆ ಬೇರೊಂದು ಹೆಸರಿನಿಂದ ಕರೆದರೂ ಅಡ್ಡಿಯಿಲ್ಲ. "ಕೈಲಾದ ಮಟ್ಟಿಗೆ ಮಾಡುವೆನು" ಎಂದು ಹೇಳುವವನು ತನ್ನ ಹೇಡಿತನವನ್ನಾಗಲೀ ಅಭಿಮಾನವನ್ನಾಗಲೀ ತೋರಿಸಿದಂತೆ. ತಾನೇ ಅದಕ್ಕೆ ನಮ್ರತೆಯೆಂದು ಬೇಕಾದರೆ ಕರೆದುಕೊಳ್ಳಲಿ. ಇದರಲ್ಲಿ ನಮ್ರತೆಯ ಗಂಧವೂ ಇಲ್ಲ. "ಕೈಲಾದ ಮಟ್ಟಿಗೆ" ಎಂಬ ವಚನವು ಶುಭ ನಿಶ್ಚಯಗಳಲ್ಲಿ ವಿಷದ ಸಮಾನವಿದೆ. ಎಂದು ನಾನು ನನ್ನ ಜೀವನದಲ್ಲಿಯೂ ಬೇರೆ ಅನೇಕ ಜನರ ಜೀವನಗಳಲ್ಲಿಯೂ ನೋಡಿದ್ದೇನೆ. ಕೈಲಾದ ಮಟ್ಟಿಗೆ ಮಾಡುವುದೆಂದರೆ ಮೊದಲನೆಯ ತೊಂದರೆಗೇ ಬಿಟ್ಟು ಬಿಡುವುದು. ಸತ್ಯವನ್ನು ಕೈಲಾದ ಮಟ್ಟಿಗೆ ಪಾಲಿಸುವೆನು ಎಂಬ ವಾಕ್ಯಕ್ಕೆ ಅರ್ಥವೇ ಇಲ್ಲ. ವ್ಯಾಪಾರದಲ್ಲಿ ಯಾರಾದರೂ ಶಕ್ಯವಿದ್ದ ಮಟ್ಟಿಗೆ ಇಂತಿಷ್ಟು ತಾರೀಖಿಗೆ ಇಂತಿಷ್ಟು ರಕಮು ತುಂಬುತ್ತೇನೆ, ಎಂದು ಬರೆದು ಕೊಟ್ಟ ಚೀಟಿಯು, ಚಕ್ಕು, ಹುಂಡಿಯೆಂದು ಸ್ವೀಕಾರವಾಗಬಲ್ಲದೋ ? ಅದರಂತೆಯೇ ಕೈಲಾದ ಮಟ್ಟಿಗೆ ಸತ್ಯವನ್ನು ಪಾಲಿಸುವವನ ಹುಂಡಿಯು ಈಶ್ವರನ ಅಂಗಡಿಯಲ್ಲಿ ನಡೆಯಲಾರದು.

ಈಶ್ವರನು ಸ್ವತಃ ನಿಶ್ಚಯದ, ವ್ರತದ ಸಂಪೂರ್ಣ ಮೂರ್ತಿಯಾಗಿದ್ದಾನೆ. ಅವನು ತನ್ನ ನಿಯಮಗಳಿಂದ ಒಂದು ಅಣುಮಾತ್ರ ಸರಿದರೆ, ಅವನು ಈಶ್ವರನಾಗಿ ಉಳಿಯಲಾರನು. ಸೂರ್ಯನು ಮಹಾವ್ರತಧಾರಿ ಇರುವುದರಿಂದಲೇ ಜಗತ್ತಿನಲ್ಲಿ ಬೇಗುಬೆಳಗುಗಳು ಆಗುತ್ತವೆ. ಶುದ್ಧ ಪಂಚಾಂಗಗಳು ರಚಿಸಲ್ಪಡುತ್ತವೆ. ಅವನು ತನ್ನ ವ್ರತಪಾಲನೆಯಿಂದ ತನ್ನ ಉದಯಾಸ್ತಗಳ ಸಂಬುಗೆಯನ್ನು ಮಾಡಿಕೊಟ್ಟು, ನಾವು ಸುರಕ್ಷಿತರಿದ್ದೇವೆಂದು ತಿಳಿದುಕೊಳ್ಳುವಂತೆ ಮಾಡಿದ್ದಾನೆ. ಎಲ್ಲ ವ್ಯಾಪಾರಗಳೂ ವಚನನಿಷ್ಠೆಯೊಂದರ ಆಧಾರದ ಮೇಲೆಯೇ ಇರುತ್ತವೆ. ವ್ಯಾಪಾರಿಗಳು ಪರಸ್ಪರರಲ್ಲಿ ಕರಾರುಗಳನ್ನು ಮಾಡಿಕೊಳ್ಳದಿದ್ದರೆ ವ್ಯಾಪಾರವೇ ನಡೆಯುಲಿಕ್ಕಿಲ್ಲ. ಹೀಗೆ ವ್ರತವು ಸರ್ವವ್ಯಾಪಕ ವಸ್ತುವಾಗಿ ಕಾಣಿಸುತ್ತದೆ. ಅಂದಮೇಲೆ ನಮ್ಮ ಜೀವನವನ್ನು ನಿಗ್ರಹಿಸಬೇಕೆಂಬ ಪ್ರಶ್ನವು ಉಂಟಾದಾಗಲೂ ಈಶ್ವರ ದರ್ಶನವನ್ನು ಮಾಡಿಕೊಳ್ಳುವ ಪ್ರಶ್ನವಿದ್ದಾಗಲೂ ವ್ರತಗಳಿಲ್ಲದೆ ಹೇಗೆ ನಡೆದೀತು? ಆದುದರಿಂದ ವ್ರತದ ಆವಶ್ಯಕತೆಯ ವಿಷಯಕ್ಕೆ ನಮ್ಮ ಮನಸ್ಸಿನಲ್ಲಿ ಎಂದೂ ಸಂಶಯವಿರಕೂಡದು.

---

# ಪರಿಶಿಷ್ಟ

ವ್ರತ ವಿಚಾರಗಳನ್ನು ಅಭ್ಯಾಸ ಮಾಡುವವರಿಗೆ ಉಪಯೋಗವಾಗಬಹುದೆಂದು ತಿಳಿದು, ಆಶ್ರಮ ನಿಯಮಾವಲಿಯೊಳಗಿಂದ ಕೆಳಗಿನ ಭಾಗವನ್ನು ಕೊಡಲಾಗಿದೆ.

## ಸತ್ಯ (೧)

ಸಾಮಾನ್ಯವಾಗಿ ವ್ಯವಹಾರದಲ್ಲಿ ಅಸತ್ಯವನ್ನು ಮಾತಾಡದಿರುವುದು ಅಥವಾ ಆಚರಿಸದಿರುವುದಷ್ಟೇ ಸತ್ಯವಲ್ಲ. ಸತ್ಯವೇ ಪರಮೇಶ್ವರನು. ಅದರ ಹೊರತು ಬೇರೆ ಏನೂ ಇಲ್ಲ. ಈ ಸತ್ಯದ ಶೋಧಕ್ಕಾಗಿಯೂ ಅದರ ಆರಾಧನೆಗಾಗಿಯೂ ಉಳಿದ ಎಲ್ಲ ನಿಯಮಗಳ ಆವಶ್ಯಕತೆಯು. ಅವುಗಳ ಉತ್ಪತ್ತಿಯಾದರೂ ಸತ್ಯದಿಂದಲೇ ಆದೆ. ಈ ಸತ್ಯೋಪಾಸಕನು, ತಾನು ಕಲ್ಪಿಸಿದ ದೇಶಹಿತಕ್ಕಾಗಿಯೂ ಅಸತ್ಯವನ್ನು ನುಡಿಯಲಾರನು, ಆಚರಿಸಲಾರನು. ಅವನು ಸತ್ಯಕ್ಕಾಗಿ ಪ್ರಲ್ಹಾದನಂತೆ ತಾಯಿತಂದೆ ಮುಂತಾದ ಹಿರಿಯರ ಆಜ್ಞೆಯನ್ನೂ ವಿನಯಪೂರ್ವಕವಾಗಿ ಭಂಗ ಮಾಡುವುದೇ ತನ್ನ ಧರ್ಮವೆಂದು ತಿಳಿಯುವನು.

## ಅಹಿಂಸೆ (೨)

ಪ್ರಾಣಿಗಳ ವಧೆ ಮಾಡಬಾರದೆಂಬುದಿಷ್ಟೇ ಈ ವ್ರತಾಚರಣೆಗೆ ಸಾಕಿಲ್ಲ. ಅಹಿಂಸೆ ಎಂದರೆ ಸೂಕ್ಷ್ಮ ಜಂತುಗಳಿಂದ ಪ್ರಾರಂಭ ಮಾಡಿಕೊಂಡು ಮನುಷ್ಯರ ವರೆಗೆ ಎಲ್ಲ ಪ್ರಾಣಿಗಳ ವಿಷಯಕ್ಕೂ ಸಹಾನುಭೂತಿಯು. ಈ ವ್ರತವನ್ನಾಚರಿಸುವವನು ಭಯಂಕರವಾದ ಅನ್ಯಾಯ ಮಾಡುವವನ ವಿಷಯಕ್ಕೂ ಕ್ರೋಧವನ್ನು ತಾಳುವದಿಲ್ಲ. ಅವನ ಮೇಲೆ ಪ್ರೇಮಭಾವವನ್ನಿಡುವನು, ಅವನ ಹಿತವನ್ನು ಬಯಸುವನು, ಮತ್ತು

ಮಾಡುವನು. ಅವನ ಮೇಲೆ ಪ್ರೇಮ ಮಾಡುತ್ತಿದ್ದರೂ ಅನ್ಯಾಯಿಯ ಅನ್ಯಾಯಕ್ಕೆ ವಶವಾಗುವದಿಲ್ಲ. ಅನ್ಯಾಯದ ವಿರೋಧ ಮಾಡುತ್ತಿರುವಾಗ ಅವನು ಕೊಡುವ ಕಷ್ಟವನ್ನು ಅಹಿಂಸಾವ್ರತಧಾರಿಯು ತಾಳ್ಮೆಯಿಂದಲೂ ಅವನ ದ್ವೇಷಮಾಡದಂತೆಯೂ ಸಹನ ಮಾಡಿಕೊಳ್ಳುವನು.

## ಬ್ರಹ್ಮಚರ್ಯ (೩)

ಬ್ರಹ್ಮಚರ್ಯವನ್ನಾಚರಿಸಿದ ಹೊರತು ಮೇಲಿನ ವ್ರತಗಳ ಆಚರಣೆಯು ಅಶಕ್ಯವದೆ. ಬ್ರಹ್ಮಚಾರಿಯು ಯಾವಳಾದರೊಬ್ಬ ಸ್ತ್ರೀಯ ಮೇಲೆ ಅಥವಾ ಪುರುಷನ ಮೇಲೆ ಕುದೃಷ್ಟಿಯನ್ನಿಡದಿದ್ದರೆ ತೀರಲಿಲ್ಲ. ಅವನು ಮನಸ್ಸಿನಿಂದ ವಿಷಯಗಳ ಚಿಂತನವನ್ನಾಗಲಿ, ಸೇವನವನ್ನಾಗಲಿ ಮಾಡಬಾರದು. ಲಗ್ನವಾಗಿದ್ದರೆ ತನ್ನ ಹೆಂಡತಿಯ ಸಂಗಡವಾಗಲಿ, ಗಂಡನ ಸಂಗಡವಾಗಲಿ, ವಿಷಯಭೋಗವನ್ನು ಭೋಗಿಸದೆ ಇಬ್ಬರೂ ಮಿತ್ರರೆಂದು ತಿಳಿದುಕೊಂಡು, ಒಬ್ಬರಿಗೊಬ್ಬರ ಸಂಗಡ ನಿರ್ಮಲವಾದ ಸಂಬಂಧವನ್ನಿಡುವರು. ತನ್ನ ಹೆಂಡತಿಯನ್ನೇ ಆಗಲಿ, ಎರಡನೇ ಹೆಂಗಸರನ್ನೇ ಆಗಲಿ, ತನ್ನ ಗಂಡನನ್ನೇ ಆಗಲಿ, ಎರಡನೇ ಗಂಡಸರನ್ನೇ ಆಗಲಿ, ಅವರನ್ನು ವಿಕಾರಮಯವಾದ ಸ್ಪರ್ಶ ಮಾಡುವುದು, ಅವರ ಸಂಗಡ ವಿಕಾರಮಯವಾದ ಭಾಷಣ ಮಾಡುವುದು ಇಲ್ಲವೆ ವಿಕಾರಮಯವಾದ ಬೇರೆ ವರ್ತನ ಮಾಡುವುದು ಸ್ಥೂಲ ಬ್ರಯರ್ಚಯರ್ದ ಭಂಗವು. ಗಂಡಸು ಗಂಡಸರಲ್ಲಿಯೇ ಆಗಲಿ, ಹೆಂಗಸು ಹೆಂಗಸರಲ್ಲಿಯೇ ಆಗಲಿ, ಅಥವಾ ಇಬ್ಬರೂ ಯಾವದಾದರೊಂದು ವಸ್ತುವಿನ ವಿಷಯಕ್ಕೆ ಆಗಲಿ ವಿಕಾರಮಯವಾದ ವರ್ತನ ಮಾಡುವದೂ ಸ್ಥೂಲ ಬ್ರಹ್ಮಚರ್ಯದ ಭಂಗವು.

## ಅಸ್ವಾದ (೪)

ಮನುಷ್ಯನು ನಾಲಿಗೆಯ ರುಚಿಗಳನ್ನು ( ಸ್ವಾದಗಳನ್ನು ) ಗೆದೆಯಲಾರದ ವರೆಗೆ ಬ್ರಹ್ಮಚರ್ಯದ ಪಾಲನವು ಅತಿ ಕಠಿನವೆಂದು ಅನುಭವ ಬಂದದ್ದರಿಂದ ಇದಕ್ಕೆ ವ್ರತಗಳಲ್ಲಿ ಬೇರೆ ಸ್ಥಾನವನ್ನು ಕೊಡಲಾಗಿದೆ.

ಊಟವು ಕೇವಲ ಶರೀರಯಾತ್ರೆಗಾಗಿಯೇ ಇರತಕ್ಕದ್ದೇ ಹೊರತು, ಭೋಗಕ್ಕಾಗಿ ಎಂದೂ ಇರತಕ್ಕದ್ದಲ್ಲ. ಆದ್ದರಿಂದ ಅದನ್ನು ಔಷಧವೆಂದು ತಿಳಿದು ಸಂಯಮಪೂರ್ವಕವಾಗಿ ತೆಗೆದುಕೊಳ್ಳುವದು ಆವಶ್ಯಕವಿದೆ. ಈ ವ್ರತವನ್ನಾಚರಿಸುವವನು, ವಿಕಾರವನ್ನು ಉತ್ಪನ್ನ ಮಾಡುವಂಥ ಮಸಾಲೆ ಮುಂತಾದವುಗಳನ್ನು ತ್ಯಾಗ ಮಾಡುವನು. ಆಶ್ರಮದಲ್ಲಿ ಮಾಂಸಾಹಾರ, ಮದ್ಯಪಾನ, ತಂಬಾಕು, ಗಾಂಜಿ, ಮುಂತಾದವುಗಳ ನಿಷೇಧವಿದೆ. ಈ ವ್ರತದಲ್ಲಿ ಸ್ವಾದದ ಸಲುವಾಗಿ ಮೇಜವಾನಿಯ ಅಥವಾ ಊಟದ ಆಗ್ರಹ ಮಾಡುವುದು ನಿಷೇಧವಿದೆ.

## ಅಸ್ತೇಯ (೫)

ಎರಡನೆಯವರ ವಸ್ತುವನ್ನು ಅವರ ಸಮ್ಮತಿಯ ಹೊರತು ತೆಗೆದುಕೊಳ್ಳದಿರುವುದೆಂದರೆ ಮಾತ್ರ ಈ ವ್ರತದ ಆಚರಣೆಗೆ ಸಾಕಿಲ್ಲ. ಒಂದು ಕಾರ್ಯಕ್ಕಾಗಿ ಸಿಕ್ಕ ಒಡವೆಯನ್ನು ಬೇರೊಂದು ಕಾರ್ಯಕ್ಕೆ ಉಪಯೋಗಿಸುವುದೂ ಗೊತ್ತು ಮಾಡಿದ ಅವಧಿಗಿಂತ ಹೆಚ್ಚಿನ ಅವಧಿಯ ವರೆಗೆ ಅದನ್ನು ಉಪಯೋಗಿಸುವುದೂ ಕಳ್ಳತನವೇ ! ಈ ವ್ರತದ ಮೂಲದಲ್ಲಿ ಅಡಕವಾಗಿರುವ ಸೂಕ್ಷ್ಮ ಸತ್ಯವೆಂದರೆ– ಪರಮಾತ್ಮನು ಪ್ರಾಣಿಗಳ ಸಲುವಾಗಿ ಆವಶ್ಯಕವಿದ್ದ ವಸ್ತುಗಳನ್ನೇ ದಿನಾಲು ಹುಟ್ಟಿಸುತ್ತಾನೆ. ಮತ್ತು ಕೊಡುತ್ತಾನೆ. ಅದಕ್ಕಿಂತಲೂ ಹೆಚ್ಚು ಸ್ವಲ್ಪವನ್ನೂ ಉತ್ಪನ್ನ ಮಾಡುವುದಿಲ್ಲ. ಆದುದರಿಂದ ಮನುಷ್ಯನು ಆದಷ್ಟು ಕಡಿಮೆಯೊಳಗೇ ಕಡಿಮೆ ಎಂದರೆ ತನ್ನ ಕೊರತೆಗಳಿಗಿಂತ ಸ್ವಲ್ಪವಾದರೂ ಹೆಚ್ಚಿಗೆ ತೆಗೆದುಕೊಳ್ಳುವುದು ಕಳವು.

## ಅಪರಿಗ್ರಹ (೬)

ಅಪರಿಗ್ರಹವು ಅಸ್ತೇಯದ ಹೊಟ್ಟೆಯೊಳಗೇ ಬರುತ್ತದೆ. ಅನಾವಶ್ಯಕವಾದ ವಸ್ತುಗಳನ್ನು ತೆಗೆದುಕೊಳ್ಳದಂತೆಯೇ ಅದರ ಸಂಗ್ರಹವನ್ನೂ ಮಾಡಬಾರದು. ಆದುದರಿಂದ ಅನಾವಶ್ಯಕವಾದ ಅನ್ನವನ್ನಾಗಲೀ, ಕುರ್ಚಿ ಮೇಜುಗಳಂಥ ಸಾಧನಗಳನ್ನಾಗಲೀ ಸಂಗ್ರಹ ಮಾಡುವದು

ಈ ವ್ರತದ ಭಂಗವು. ಕುರ್ಚಿಯಿಲ್ಲದೆ ಸಾಗುವಂಥವರು ಕುರ್ಚಿಯನ್ನಿಡಬಾರದು. ಅಪರಿಗ್ರಹಿ ಮನುಷ್ಯನು ದಿನಾಲು ತನ್ನ ಜೀವನವನ್ನು ಸರಳ ಮಾಡುತ್ತ ಹೋಗುವನು.

## ಕಾಯಕ (೭)

ಅಸ್ತೇಯ ಮತ್ತು ಅಪರಿಗ್ರಹ ವ್ರತಗಳ ಸಲುವಾಗಿ ಕಾಯಕದ ಆವಶ್ಯಕತೆಯಿರುತ್ತದೆ. ಇದಲ್ಲದೆ ಮನುಷ್ಯಪ್ರಾಣಿಗಳೆಲ್ಲರೂ ತಮ್ಮ ತಮ್ಮ ಹೊಟ್ಟೆಗಳನ್ನು ಶಾರೀರಕ ಶ್ರಮದಿಂದ ತುಂಬಿಸಿಕೊಂಡರೆ ಅವರು ಸಾಮಾಜಿಕ ಮತ್ತು ತಮ್ಮ ಸ್ವಂತ ದ್ರೋಹಗಳೊಳಗಿಂದ ಪಾರಾಗ ಬಲ್ಲರು. ಅವಯವಗಳು ನಡೆಯಬಲ್ಲ, ತಿಳಿವಳಿಕೆಯುಂಟಾಗಿರುವ, ಎಲ್ಲ ಹೆಂಗಸರು, ಗಂಡಸರು, ಸ್ವಂತ ಮಾಡಿ ಮುಗಿಸಲಿಕ್ಕೆ ಯೋಗ್ಯವಿದ್ದ ತಮ್ಮ ಎಲ್ಲ ನಿತ್ಯ ಕರ್ಮಗಳನ್ನೂ ಮುಗಿಸತಕ್ಕದ್ದು. ಕಾರಣವಿಲ್ಲದೆ, ಎರಡನೆಯವರ ಸೇವೆಯನ್ನು ತೆಗೆದುಕೊಳ್ಳಬಾರದು. ಹುಡುಗರ, ಬೇರೆ ಅವಯವಹೀನ ಜನರ, ವೃದ್ಧ ಸ್ತ್ರೀಪುರುಷರ ಸೇವೆಯು ಪ್ರಾಪ್ತವಾದಾಗ ಅದನ್ನು ಮಾಡುವುದು ಸಾಮಾಜಿಕ ಹೊಣೆಗಾರಿಕೆಯನ್ನು ತಿಳಿಯುವಂಥ ಪ್ರತಿಯೊಬ್ಬ ಮನುಷ್ಯನ ಧರ್ಮವಾಗಿದೆ.

ಇದೇ ತತ್ವಕ್ಕನುಸರಿಸಿ ಆಶ್ರಮದೊಳಗೆ ಆಳಿನ ಹೊರತು ಸಾಗದಿದ್ದಲ್ಲಿ ಆಳುಗಳನ್ನು ಇಟ್ಟುಕೊಳ್ಳಲಾಗುವುದು. ಅವರ ಸಂಗಡ ವರ್ತಿಸುವಾಗ ಆಳು ಒಡೆಯರೆಂಬ ಭಾವನೆಯನ್ನು ಇಡುವುದಿಲ್ಲ.

## ಸ್ವದೇಶಿ (೮)

ಮನುಷ್ಯನು ಸರ್ವಶಕ್ತಪ್ರಾಣಿಯಲ್ಲದ್ದರಿಂದ ಅವನು ತನ್ನ ನೆರೆಯವರ ಸೇವೆಯನ್ನು ಮಾಡುವದರಲ್ಲಿ ಜಗತ್ತಿನ ಸೇವೆಯನ್ನು ಮಾಡುತ್ತಾನೆ. ಈ ಭಾವನೆಯ ಹೆಸರು ಸ್ವದೇಶಿ. ತನ್ನ ಹತ್ತರದಲ್ಲಿದ್ದವರ ಸೇವೆಯನ್ನು ಬಿಟ್ಟು ದೂರದಲ್ಲಿದ್ದವರ ಸೇವೆಯನ್ನು ಮಾಡಲಿಕ್ಕೆ ಅಥವಾ ತೆಗೆದುಕೊಳ್ಳಲಿಕ್ಕೆ ಓಡುವವನು ಸ್ವದೇಶಿ ವ್ರತದ ಭಂಗ ಮಾಡುತ್ತಾನೆ.

ಈ ಭಾವನೆಯಿಂದಲೇ ಜಗತ್ತು ಸುವ್ಯವಸ್ಥಿತವಾಗಿ ಇರಬಲ್ಲದು. ಇದರ ಭಂಗದಲ್ಲಿ ಅವ್ಯವಸ್ಥೆಯು ಇರುವುದು. ಈ ನಿಯಮಕ್ಕನುಸರಿಸಿ ಶಕ್ಯವಿದ್ದ ಮಟ್ಟಿಗೆ ನೆರೆಯ ಅಂಗಡಿಯವನ ಸಂಗಡವೇ ವ್ಯವಹಾರವನ್ನಿಡುವಾ. ನಮ್ಮ ದೇಶದಲ್ಲಿ ಸಿದ್ಧವಾಗುವ, ಅಥವಾ ಸುಲಭರೀತಿಯಿಂದ ಮಾಡಲಿಕ್ಕೆ ಶಕ್ಯವಿದ್ದ ವಸ್ತುಗಳನ್ನು ಪರದೇಶದಿಂದ ತರಿಸುವುದು ಬೇಡ. ಸ್ವದೇಶಿಯಲ್ಲಿ ಸ್ವಾರ್ಥಕ್ಕೆ ಸ್ಥಾನವಿಲ್ಲ. ತನ್ನನ್ನು ಕುಟುಂಬದ ಕಲ್ಯಾಣಕ್ಕಾಗಿಯೂ ಕುಟುಂಬವನ್ನು ಊರ ಕಲ್ಯಾಣಕ್ಕಾಗಿಯೂ ಊರನ್ನು ದೇಶದ ಕಲ್ಯಾಣಕ್ಕಾಗಿಯೂ ದೇಶವನ್ನು ಜಗತ್ತಿನ ಕಲ್ಯಾಣಕ್ಕಾಗಿಯೂ ಹೋಮ ಮಾಡಬಹುದು.

## ಅಭಯ (೯)

ನಿರ್ಭಯತೆಯ ಹೊರತು ಸತ್ಯ, ಅಹಿಂಸೆ ಮುಂತಾದ ವ್ರತಗಳ ಆಚರಣೆಯೂ ಅಸಂಭವವಿದೆ. ಈಗಂತೂ ಎಲ್ಲ ಕಡೆಯಲ್ಲಿಯೂ ಭಯವು ತುಂಬಿಕೊಂಡಿರುವದರಿಂದ ಅದರ ಸ್ಥಳದಲ್ಲಿ ನಿರ್ಭಯತೆಯ ಚಿಂತನವೂ ಅಭ್ಯಾಸವೂ ಅವಶ್ಯವಿರುವದರಿಂದ ಅದಕ್ಕೆ ವ್ರತಗಳಲ್ಲಿ ಸ್ಥಾನವನ್ನು ಕೊಡಲಾಗಿದೆ. ಸತ್ಯಪರಾಯಣನಾಗಲಿಚ್ಛಿಸುವವನು ಆಪ್ತೇಷ್ಟರಿಗಾಗಲೀ ಸರಕಾರಕ್ಕಾಗಲೀ, ಕಳ್ಳರಿಗಾಗಲೀ, ಬಡತನಕ್ಕಾಗಲೀ, ಸಾವಿಗಾಗಲೀ ಅಂಜಬಾರದು.

## ಅಸ್ಪೃಶ್ಯತಾ ನಿವಾರಣೆ (೧೦)

ಹಿಂದೂ ಧರ್ಮದೊಳಗೆ ಅಸ್ಪೃಶ್ಯತೆಯ ರೂಢಿಯು ಮನೆಮಾಡಿಕೊಂಡಿರುವುದು. ಅದರಲ್ಲಿ ಧರ್ಮವಿದೆ ಎಂಬ ತಿಳಿವಳಿಕೆಯು ಉಂಟಾದುದರಿಂದ ಅಸ್ಪೃಶ್ಯತಾ ನಿವಾರಣೆಗೆ ವ್ರತಗಳಲ್ಲಿ ಸ್ಥಾನವನ್ನು ಕೊಡಲಾಗಿದೆ. ಅಸ್ಪೃಶ್ಯರೆಂದು ತಿಳಿಯುವವರ ಸಲುವಾಗಿಯೂ ಬೇರೆ ಜಾತಿಯವರಿಗಿದ್ದಷ್ಟೇ ಆಶ್ರಮದಲ್ಲಿ ಸ್ಥಾನವಿದೆ.

ಆಶ್ರಮವು ಜಾತಿಭೇದವನ್ನು ಎಣಿಸುವುದಿಲ್ಲ. ಜಾತಿಭೇದದಿಂದ ಹಿಂದೂ ಧರ್ಮದ ಹಾನಿಯಾಗಿರುತ್ತದೆಂಬ ತಿಳಿವಳಿಕೆಯುಂಟು. ಅದ

ರಲ್ಲಿದ್ದ ಉಚ್ಚ ನೀಚ ಭಾವನೆಯೂ ಮೈಲಿಗೆಯೂ ಅಹಿಂಸಾ ಧರ್ಮಕ್ಕೆ ಘಾತಕವಿದೆ. ಆಶ್ರಮಕ್ಕೆ ವರ್ಣಾಶ್ರಮ ಧರ್ಮವು ಮಾನ್ಯವುಂಟು. ಅದರಲ್ಲಿಯು ವರ್ಣ ವ್ಯವಸ್ಥೆಯು ಕೇವಲ ಉದ್ಯೋಗದ ಆಧೀನವಾಗಿರುತ್ತ ದೆಂದು ತಿಳಿಯುತ್ತದೆ. ಆದುದರಿಂದ ತಾಯಿ ತಂದೆಗಳ ಉದ್ಯೋಗ ದಿಂದಲೇ ಉಪಜೀವಿಕೆಯನ್ನು ಹುಟ್ಟಿಸಿಕೊಂಡು ಉಳಿದ ಹೊತ್ತನ್ನು ಶುದ್ಧ ಜ್ಞಾನಸಂಪಾದನ ಮಾಡುವದರಲ್ಲಿಯೂ ಇದ್ದ ಜ್ಞಾನವನ್ನು ಹೆಚ್ಚು ಬೆಳಿಸುವದರಲ್ಲಿಯೂ ಉಪಯೋಗಿಸಬೇಕು. ಸ್ಮೃತಿಯಲ್ಲಿದ್ದ ಆಶ್ರಮ ವ್ಯವಸ್ಥೆಯು ಜಗತ್ತಿಗೆ ಹಿತ ಮಾಡುವಂಥಾದ್ದಿರುತ್ತದೆ. ಆದರೆ ವರ್ಣಾಶ್ರಮ ಧರ್ಮವು ಮಾನ್ಯವಿದ್ದರೂ ಆಶ್ರಮ ಜೀವನವನ್ನು ಗೀತಾ ಮಾನ್ಯವೂ, ವ್ಯಾಪಕವೂ ಭಾವನಾಪ್ರಧಾನ ಸನ್ಯಾಸವೂ ಅದ ಆದರ್ಶ ವನ್ನು ಮುಂದಿಟ್ಟುಕೊಂಡು ರಚಿಸಿರುವದರಿಂದ ವರ್ಣಭೇದಕ್ಕೆ ಸ್ಥಾನವಿಲ್ಲ.

## ಸಹಿಷ್ಣುತೆ (೧೧)

ಜಗತ್ತಿನಲ್ಲಿ ಪ್ರಚಲಿತವಾಗಿದ್ದ ಎಲ್ಲ ಮುಖ್ಯ ಧರ್ಮಗಳು ಸತ್ಯವನ್ನು ಪ್ರತಿಪಾದಿಸುತ್ತವೆಂದು ಆಶ್ರಮದ ನಂಬಿಕೆ. ಅವೆಲ್ಲವುಗಳು ಅಪೂರ್ಣ ವಾದ ಮನುಷ್ಯನ ಮುಖಾಂತರ ವ್ಯಕ್ತವಾಗಿರುವುದರಿಂದ ಅವೆಲ್ಲವುಗಳಲ್ಲಿ ಅಪೂರ್ಣತ್ವವು ಅಥವಾ ಅಸತ್ಯವು ಮಿಶ್ರವಾಗಿದೆ. ಆದುದರಿಂದ ನಮ್ಮ ಧರ್ಮಕ್ಕೆ ಕೊಡುವಷ್ಟು ಮಾನವನ್ನು ಅನ್ಯಧರ್ಮಗಳಿಗೂ ನಾವು ಕೊಡ ಬೇಕಾಗುವುದು. ಇಂಥ ಸಹಿಷ್ಣುತೆಯಿದ್ದಲ್ಲಿ ಒಂದಕ್ಕೊಂದು ಧರ್ಮದ ವಿರೋಧವಾಗಲೀ ಪರಧರ್ಮಿಯನ್ನು ತನ್ನ ಧರ್ಮದಲ್ಲಿ ತರುವ ಪ್ರಯತ್ನ ವಾಗಲೀ ಉಂಟಾಗುವುದಿಲ್ಲ. ಎಲ್ಲ ಧರ್ಮಗಳಲ್ಲಿದ್ದ ದೋಷಗಳು ದೂರವಾಗಲೆಂಬ ಪ್ರಾರ್ಥನೆಯನ್ನೂ ಭಾವನೆಯನ್ನೂ ಯಾವಾಗಲೂ ಇಡಬೇಕು.

---

## ಹುಬ್ಬಳ್ಳಿಯ ' ಕರ್ನಾಟಕ ಶಿಕ್ಷಣ ಸಮಿತಿ ' ಯಿಂದ ಪ್ರಕಟವಾದ

### ಸುಪ್ರಸಿದ್ಧ ಲೇಖಕರ ರಸಭರಿತವಾದ ಮನೋಹರ ಪುಸ್ತಕಗಳು



| | | | | | |
|---|---|---|---|---|---|
| ೧ | ಬಾಪೂ (ಸಚಿತ್ರ) | | ಬೆಲೆ | ರೂ. | ೧—೦—೦ |
| ೨ | ಭರತಖಂಡದ ಜೀವಜ್ಯೋತಿಗಳು | | ,, | ,, | ೧—೦—೦ |
| ೩ | ಗಾಂಧಿ ವಿಚಾರದೋಹನ | | ,, | ,, | ೦-೧೪—೦ |
| ೪ | ಭಾರತೀಯರ ಮೇಲ್ಮೆ | | ,, | ,, | ೦—೮—೬ |
| ೫ | ವೀರಮಾತೆ ಕುಂತೀದೇವಿ | | ,, | ,, | ೦-೧೦—೬ |
| ೬ | ಮಕ್ಕಳ ಮಹಾತ್ಮಾ ಗಾಂಧಿ (ಸಚಿತ್ರ) | | ,, | ,, | ೦—೩—೬ |
| ೭ | ಸಾಧುವರ್ಯ ನಾಗಮಹಾಶಯ ಜೀವನ ಚರಿತ್ರೆ (ಸಚಿತ್ರ) | | ,, | ,, | ೦-೧೦—೬ |
| ೮ | ಸ್ವಾಮಿ ವಿವೇಕಾನಂದರವರ ಕರ್ಮಯೋಗ | ,, | ,, | ,, | ೦—೮—೬ |
| ೯ | ನನ್ನ ಹಿಮಾಲಯ ಯಾತ್ರೆ | ,, | ,, | ,, | ೦—೮—೬ |
| ೧೦ | ವರ್ಧಾ ಶಿಕ್ಷಣ ಯೋಜನೆ | | ,, | ,, | ೦—೪—೦ |
| ೧೧ | ಶ್ರೀರಾಮಕೃಷ್ಣ ಪರಮಹಂಸರ ಬೋಧಾಮೃತ ಭಾಗ ೧ (ಸಚಿತ್ರ) | | ,, | ,, | ೦-೧೦—೬ |
| ೧೨ | ಕುರುಡ ಧರ್ಮ (ಕಾದಂಬರಿ) | | ,, | ,, | ೦-೧೦—೬ |
| ೧೩ | ಗೌರಾಂಗಪ್ರಭುವಿನ ಚರಿತ್ರೆ | | ,, | ,, | ೦-೧೪—೦ |
| ೧೪ | ವೀರವಲ್ಲಭಭಾಯಿ | | ,, | ,, | ೦—೭—೦ |
| ೧೫ | ಪಂ. ಮೋತೀಲಾಲ ನೆಹರು | | ,, | ,, | ೦—೨—೦ |
| ೧೬ | ವಿಜಯನಗರದ ಸಾಮ್ರಾಜ್ಯ (ಸಚಿತ್ರ) | | ,, | ,, | ೦-೧೦—೬ |
| ೧೭ | ಸಾಮ್ಯವಾದವೇ ಏಕೆ | | ,, | ,, | ೦—೫—೬ |
| ೧೮ | ಭೀಷ್ಮ ಚರಿತ್ರೆ (ಸಚಿತ್ರ) | | ,, | ,, | ೦—೪—೦ |
| ೧೯ | ಶ್ರೀಬಸವಣ್ಣನವರು | ,, | ,, | ,, | ೦—೫—೦ |
| ೨೦ | ಸಂಸಾರ ಚಿತ್ರ | | ,, | ,, | ೦-೧೪—೦ |

ಇದನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣ ಮಂದಿರದಲ್ಲಿ
ಶ್ರೀ. ಹ. ರಾ. ಮೋಹರೆಯವರು ಮುದ್ರಿಸಿ ಶ್ರೀ. ರಂ. ರಾ. ದಿವಾಕರರು
ಹುಬ್ಬಳ್ಳಿ ಕರ್ನಾಟಕ ಶಿಕ್ಷಣ ಸಮಿತಿ ಕಚೇರಿಯಲ್ಲಿ ಪ್ರಸಿದ್ಧಿಸಿದರು.

## ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

### ಶ್ರೀ. ದಿವಾಕರ ಕೃತ ಪ್ರಸಿದ್ಧ ಗ್ರಂಥಗಳು

| | | | |
|---|---|---|---|
| ೧ | ಹರಿಭಕ್ತಿ ಸುಧೆ | .... | ೨—೦—೦ |
| ೨ | ಗೀತೆಯ ಗುಟ್ಟು | .... | ೧—೦—೦ |
| ೩ | ಉಪನಿಷತ್ಕಥಾವಲಿ | (ಸಚಿತ್ರ) | ೦—೧೨—೦ |
| ೪ | ಉಪನಿಷತ್ಪ್ರಕಾಶ | (ಭಾಗ ೧) | ೦—೧೨—೦ |
| ೫ | ಉಪನಿಷತ್ಪ್ರಕಾಶ | (ಭಾಗ ೨) | ೦—೧೨—೦ |
| ೬ | ಉಪನಿಷತ್ ರಹಸ್ಯ | .... | ೧—೮—೦ |
| ೭ | ಭಕ್ತಿಸೂತ್ರಗಳು | .... | ೦—೬—೦ |
| ೮ | ಸೆರೆಯ ಮರೆಯಲ್ಲಿ | (ಸಚಿತ್ರ) | ೧—೦—೦ |
| ೯ | Nation's Call | (ರಾಷ್ಟ್ರದ ಕರೆ) | ೦—೬—೦ |
| ೧೦ | ಅಂತರಾತ್ಮನಿಗೆ — | ಕಲಾಪೂರ್ಣವಾದ ಮೂರನೆ ಆವೃತ್ತಿ ಸಿದ್ಧವಾಗುತ್ತಲಿದೆ. | |